॥ ಶ್ರೀ ॥

# ಕರ್ಣಾಟಕ ಪಂಚರಾತ್ರವು.

ಭಾಸಮಹಾಕವಿಯ ಸಂಸ್ಕೃತ ನಾಟಕದ

ಕರ್ಣಾಟಕದ ಪರಿವರ್ತನವು.

ನಾಣ್ಣುರಿ ಸುಂದರಶಾಸ್ತ್ರಿಯಿಂದ ಪರಿಷ್ಕೃತಿಯನ್ನು ಪಡೆದುದು.





19[illegible]

MYSORE.

ಬೆಲೆ. ೧-೮ ಹಾಸಲು ಪ್ರತ್ಯೇಕ





# ಪಾತ್ರಗಳು.

—o—

| | | |
|---|---|---|
| (1) ದುರ್ಯೋಧನ | ... ... | ಹಸ್ತಿನಾಪುರದ ಅರಸು. |
| (2) ಭೀಷ್ಮ | ... ... | ಕೌರವ ಪಾಂಡವರ ಅಜ್ಜ. |
| (3) ದ್ರೋಣ | ... ... | ಧನುರ್ವಿದ್ಯಾ ಗುರು. |
| (4) ಕರ್ಣ | | ಅಂಗದೇಶದ ದೊರೆ, ದುರ್ಯೋಧನನ ಮುಖ್ಯ ಸ್ನೇಹಿತ. |
| (5) ಶಕುನಿ | ... ... | ದುರ್ಯೋಧನನ ಸೋದರಮಾವ. |
| (6) ಮುದಿಗೊಲ್ಲ | ... ... ... | ಗೊಲ್ಲರ ಗೌಡ. |
| (7) ಗೋಮಿತ್ರಕ | ... ... ... | ಗೊಲ್ಲ. |
| (8) ವಿರಾಟ | ... ... | ಮತ್ಸ್ಯದೇಶದ ಅರಸು. |
| (9) ಭಗವಂತ | ... ... | ಸನ್ಯಾಸಿ ವೇಷದ! ಧರ್ಮರಾಜ. |
| (10) ಭೀಮ | ... ... | ಧರ್ಮರಾಜನ ಹಿರಿಯ ತಮ್ಮ. |
| (11) ಅರ್ಜುನ | ... ... | ,, ಕಿರಿಯ ,, |
| (12) ಬೃಹನ್ನಳೆ | ... ... ... | ಅರ್ಜುನ. |
| (13) ಅಭಿಮನ್ಯು | ... ... ... | ಅರ್ಜುನನ ಮಗ. |
| (14) ಉತ್ತರ | ... ... | ವಿರಾಟರಾಜನ ಮಗ. |

# ಮುನ್ನುಡಿ.

—o—

ದುರ್ಯೋಧನನು ಯಜ್ಞಾಂಗವಾದ ಬ್ರಾಹ್ಮಣಸಂತರ್ಪಣೆಯ ಕೊನೆಯಲ್ಲಿ ಧನುರ್ವಿದ್ಯಾಗುರುವಾದ ದ್ರೋಣನನ್ನು ಕುರಿತು, ದಕ್ಷಿಣೆಯನ್ನು ಸ್ವೀಕರಿಸು ವಂತೆ ಬೇಡಿದಾಗ, ದ್ರೋಣನು ಪಾಂಡವರಿಗೆ ಸಲ್ಲಬೇಕಾದ ಅರ್ಧ ರಾಜ್ಯಕ್ಕಿಂ ತಲೂ ಮಿಂಚಿದ ದಕ್ಷಿಣೆಯಿಲ್ಲವೆನ್ನಲು, ಐದುರಾತ್ರಿಗಳೊಳಗಾಗಿ ಪಾಂಡವರನ್ನು ಕರೆತಂದರೆ ಅರ್ಧ ರಾಜ್ಯವನ್ನು ಕೊಡುವೆನೆಂದು ಪ್ರತಿಜ್ಞೆ ಮಾಡುವನು. ಈ ಕಾರಣದಿಂದಲೇ ಈ ರೂಪಕ್ಕೆ "ಪಂಚರಾತ್ರವೆಂಬ" ಹೆಸರು ಬಂದಿತು. ದೂತ ನೊಬ್ಬನು ವಿರಾಟನಗರದಿಂದ ಬಂದು, ಕೀಚಕರ ಕೊಲೆಯನ್ನು ತಿಳಿಸಲು ಪಾಂಡ ವರು ವಿರಾಟನಗರದಲ್ಲಿರುವರೆಂದು ನಿಶ್ಚಯಿಸಿದ ಭೀಷ್ಮನು ದ್ರೋಣನ ಬಳಿ ಸಾರ್ದು, ತನಗೆ ವಿರಾಟನೊಡನೆ ವೈರವಿರುವುದೆಂದು ನೆಪಮಾಡಿ, ವಿರಾಟನ ಗೋವುಗಳನ್ನು ಹಿಡಿಯುವಂತೆ ದುರ್ಯೋಧನನನ್ನು ಪ್ರೋತ್ಸಾಹಗೊಳಿಸಿದನು. ಅವರೆಲ್ಲರೂ ಒಟ್ಟುಗೂಡಿ ವಿರಾಟನ ಗೋವುಗಳನ್ನು ಹಿಡಿಯುತ್ತಿರುವಾಗ ಬೃಹನ್ನಳೆಯವೇಷ ವನ್ನು ತಳೆದಿದ್ದ ಅರ್ಜುನನು ಉತ್ತರನನ್ನು ರಥದಲ್ಲಿ ಕೂಡಿಸಿ, ತಾನು ಸಾರಥಿ ಯಾಗಿ, ಸ್ಮಶಾನದಲ್ಲಿಟ್ಟಿದ್ದ ತನ್ನ ಆಯುಧಗಳನ್ನು ತೆಗೆದುಕೊಂಡು ತಾನೇ ಹೋರಾಡಿ ದುರ್ಯೋಧನನೇ ಮುಂತಾದವರನ್ನು ಹಿಂದಟ್ಟಿದನು. ಬಳಿಕ ಅಡಿ ಗೆಯವನಾಗಿದ್ದ ಭೀಮನು, ಮಗನನ್ನು (ಅಭಿಮನ್ಯುವನ್ನು) ಮುದ್ದಾಡಲು ಕುತೂಹಲದಿಂದ ರಥಕ್ಕೆ ಹಾರಿ ಅಭಿಮನ್ಯುವನ್ನು ಕಂಕುಳಲ್ಲಿರಿಸಿಕೊಂಡು ವಿರಾಟನ ಹತ್ತಿರ ಕರೆತಂದುಬಿಟ್ಟನು. ಬಳಿಕ ಅಭಿಮನ್ಯುವು ವಾಸ್ತವಾಂಶವನ್ನು ಅರಿಯದೆ, ಭೀಮಾರ್ಜುನರನ್ನೂ, ವಿರಾಟನನ್ನೂ ಶತ್ರುಗಳೆಂದು ಬಗೆದು ಧಿಕ್ಕರಿಸಿ, ಬ್ರಾಹ್ಮಣ ರೂಪದಿಂದಿದ್ದ ಧರ್ಮಪುತ್ರನನ್ನು ಮಾತ್ರ ವಂದಿಸುವನು. ಇಲ್ಲಿನ ಅಭಿಮನ್ಯು, ಭೀಮಾರ್ಜುನರ ಸಂಭಾಷಣವು ಆಶ್ಚರ್ಯಕರವಾಗಿರುವುದು. ಇಷ್ಟೊಂದು ಸಾಹಸ ವನ್ನೂ ತನ್ನ ಮಗನೇ ಮಾಡಿದನೆಂದು ವಿರಾಟನು ಹಿಗ್ಗುತ್ತಿರುವಲ್ಲಿ ಉತ್ತರನು, ಬೃಹನ್ನಳೆಯ ವೇಷವನ್ನು ತಳೆದಿರುವವನೇ ಅರ್ಜುನನೆಂತಲೂ, ಅವನೇ ದುರ್ಯೋಧ ನಾದಿಗಳನ್ನು ಹಿಂದಟ್ಟಿದವನೆಂತಲೂ, ವಿರಾಟನಿಗೆ ತಿಳಿಸುವನು. ಬಳಿಕ ಅರ್ಜುನನು ವೇಷವನ್ನು ಬದಲಾಯಿಸಿರುವ ಯುಧಿಷ್ಠಿರ ಮುಂತಾದವರನ್ನು ಗುರುತಿಸಿ ಹೇಳ ಲು, ವಿಜಯಶುಲ್ಕರೂಪವಾಗಿ ವಿರಾಟನು ಉತ್ತರೆಯನ್ನು ಅರ್ಜುನನಿಗೆ ಕೊಡುವನು.

ಅರ್ಜುನನು ತನ್ನ ಮಗನಾದ ಅಭಿಮನ್ಯುವಿಗೆ ಮದುವೆಮಾಡಿಕೊಳ್ಳುವುದಾಗಿ ಸಮ್ಮತಿಸಿ, ವಿರಾಟ, ಧರ್ಮರಾಜರೊಂದಿಗೆ ಯೋಚಿಸಿ, ಮದುವೆಯ ನಿಮಿತ್ತ ಲಗ್ನಪತ್ರಿಕೆಯನ್ನು ಬರೆಯಿಸಿ ಭೀಷ್ಮ ಮುಂತಾದವರಿಗೆ ಉತ್ತರನಮೂಲಕ ಹೇಳಿಕಳುಹಿಸುವನು. ಭೀಷ್ಮಾದಿಗಳು, ಅಭಿಮನ್ಯುವು ಶತ್ರುಗಳ ಕೈಸೇರಿದನೆಂದು ಮರುಗಿ ಯಾವುದೋ ಒಂದು ಬಾಣದಲ್ಲಿ ಅರ್ಜುನನ ಹೆಸರನ್ನು ನೋಡಿ, : "ನಮ್ಮ ಅವಮಾನವೆಲ್ಲವೂ ಅರ್ಜುನನ ಕಾರ್ಯವು. ಅಭಿಮನ್ಯುವನ್ನು ಭೀಮನೇ ಕರೆದುಕೊಂಡುಹೋಗಿರುವನು "—ಎಂದು ನಿರ್ಧರಿಸುತ್ತಿರಲು, ಶಕುನಿಯು ಅದನ್ನು ಒಪ್ಪಿಕೊಳ್ಳದೆ ಪ್ರತಿಮಾತನಾಡುತ್ತಿರುವಲ್ಲಿ, ಉತ್ತರನು ಹಠಾತ್ತಾಗಿ ಬಂದು ಎಲ್ಲರನ್ನೂ ನಮಸ್ಕರಿಸಿ ಯುಧಿಷ್ಠಿರನ ಸಂದೇಶವನ್ನು ತಿಳಿಸುವನು. ಬಳಿಕ ದ್ರೋಣನ ಮಾತಿನಂತೆ ದುರ್ಯೋಧನನು ಪಾಂಡವರಿಗೆ ಅರ್ಧರಾಜ್ಯವನ್ನು ಕೊಡುವುದಕ್ಕೆ ಸಮ್ಮತಿಸುವನು. ಆದರಿಂದ ಎಲ್ಲರೂ ಸಂತುಷ್ಟರಾಗುವರು.

ಕವಿಯು ಮಹಾಭಾರತದ ಕಥೆಯನ್ನು ವಿಚಿತ್ರ ರೀತಿಯಿಂದ ರಚಿಸಿರುವುದು ಸರ್ವಜನಾಹ್ಲಾದಕರವಾಗಿರುವುದು. ಪಾಠಕರು ಒಮ್ಮೆ ಓದಿನೋಡಿದಲ್ಲಿ ಆಶ್ಚರ್ಯಭರಿತರಾಗಿ ಕವಿಯ ಚಮತ್ಕೃತಿಯನ್ನು ಕೊಂಡಾಡಿ ಆನಂದಿಸದಿರಲಾರರೆಂದು ದೃಢವಾಗಿ ನಂಬಿರುವೆನು.

ಈ ಗ್ರಂಥದ ಮುದ್ರಣ ವಿಷಯದಲ್ಲಿ ಆದರವನ್ನು ತೋರಿ ಸಹಾಯ ಮಾಡಿದ ಮ|| ರಾ|| ರಾ|| ಶ್ರೀ ಎಂ. ವೆಂಕಟಕೃಷ್ಣಯ್ಯನವರ ಉಪಕಾರವು ಚಿರಸ್ಮರಣೀಯವಾಗಿರುವುದು.

ದುರ್ಮತಿಸಂ || ಆಷಾಢಶುದ್ಧ ೭ ಸೋಮವಾರ.

ಪಾನ್ಯಂ ಸುಂದರಶರ್ಮ.



॥ ಶ್ರೀ ಶಾರದಾಂಬಾಯೈನಮಃ. ॥

# ಪಂಚರಾತ್ರ ನಾಟಕವು.



## (ಉತ್ತರ ಗೋಗ್ರಹಣವು.)

(ನಾಂದಿಯ ಅನಂತರ ಸೂತ್ರಧಾರನು ಪ್ರವೇಶಿಸುವನು.)

ಸೂತ್ರಧಾರ—* ದ್ರೋಣಪಕ್ಷಿಯಂತೆ ಕಪ್ಪುಬಣ್ಣದಿಂದ ಕೂಡಿ, ಭೂಮಿಯನ್ನು ಬೇಡುವುದಕ್ಕಾಗಿ ಭೀಮಾರ್ಜುನರಿಗೆ ದೂತನಾಗಿ, ಶಕುನೀಶ್ವರನೆನಿಸಿದ ಗರುಡನೆಂಬ ನಾವೆಯನ್ನು ನಡೆಯಿಸುವುದರಲ್ಲಿ ಕರ್ಣಧಾರನೆನಿಸಿ, ಯುದ್ಧದಲ್ಲಿ ಭಯಂಕರನಾದ ಪ್ರಯುಕ್ತ ಭೀಷ್ಮನೆಂತಲೂ, ರಣಮುಖದಲ್ಲಿ ಹಗೆಗೆ ಬೆನ್ನುತೋರದೆ ಸ್ಥಿರವಾಗಿ ನಿಂತು ಹೋರಾಡುವನಾದುದರಿಂದ ಯುಧಿಷ್ಠಿರನೆಂತಲೂ, ಶತ್ರುಗಳಿಂದ ಇದಿರಿಸಲು ಅಶಕ್ಯನಾದ ಕಾರಣ ದುರ್ಯೋಧನನೆಂತಲೂ, ಲೋಕೋತ್ತರವಾದ ದಾರಿಯಲ್ಲಿ ನಡೆಯುವ ಮೂಲಕ ಉತ್ತರ (ಗ) ನೆಂತಲೂ, ಯಜ್ಞಮುಖದಲ್ಲಿ ಅಗ್ರಪೂಜೆಯನ್ನು ಕೈಕೊಳ್ಳುವುದರಿಂದ ಅಭಿಮನ್ಯುವೆಂತಲೂ ಕರೆಯಿಸಿಕೊಳ್ಳುವ ವಿರಾಟ್ ಶಬ್ದವಾಚ್ಯನಾದ ಶ್ರೀ ಕೃಷ್ಣನು ನಮ್ಮೆಲ್ಲರನ್ನೂ ಸಲಹಲಿ !

---

* ನಾಟಕದ ಪ್ರಸ್ತಾವನೆಯಲ್ಲಿ ಕಥಾಸಂದರ್ಭವನ್ನು ಸೂಚಿಸುವುದು ಮಹಾಕವಿ ಸಂಪ್ರದಾಯಸಿದ್ಧವಾದುದು. ಅಲಂಕಾರಿಕರು ಲಕ್ಷಣಗ್ರಂಥದಲ್ಲಿ ಇದೇ ಮಾರ್ಗವನ್ನೇ ಅನುಸರಿಸಿರುವರು. ಅದಕ್ಕೆ ತಕ್ಕಂತೆಯೇ ಈ ನಾಟಕದಲ್ಲಿಯೂ, ಕವಿಯು ಮಂಗಳ ಶ್ಲೋಕದಲ್ಲಿನ ದ್ರೋಣ ಮುಂತಾದ ಶಬ್ದಗಳಿಂದ ಈ ನಾಟಕದ ಕಥಾವಿಷಯರೆನಿಸಿದ ದ್ರೋಣ, ಅರ್ಜುನ, ಭೀಮ, ಕರ್ಣ, ಶಕುನಿ, ದುರ್ಯೋಧನ ಭೀಷ್ಮ, ಯುಧಿಷ್ಠಿರ, ವಿರಾಟ, ಉತ್ತರ, ಗೋವುಗಳು, ಅಭಿಮನ್ಯು ಪದಗಳಿಂದ ಆ ಆ ಪಾತ್ರಗಳನ್ನು ಸೂಚಿಸಿ, ಪ್ರಕೃತಾನುಸಾರವಾಗಿ ಅರ್ಥವು ಶ್ರೀ ಕೃಷ್ಣನಿಗೆ ಅನ್ವಯಿಸುವಂತೆ ರಚಿಸಿರುವನು ಪ್ರಕೃತವಾದ ಅರ್ಥಕ್ಕೆ ಅನುಸಾರವಾಗಿ ಪದರಚನಾ ಚಾತುರ್ಯದಿಂದ ಸೂಚಿಸುವುದಕ್ಕೆ ಯೋಗ್ಯವಾದ ಬೇರೊಂದು ಅರ್ಥವು ಸೂಚಿತವಾದರೆ "ಮುದ್ರಾಲಂಕಾರ" ವೆನಿಸುವುದು ಎಂಬ ಲಕ್ಷಣವನ್ನು ಅನುಸರಿಸಿ ಈ ಮಂಗಳ ಶ್ಲೋಕವು ಮುದ್ರಾಲಂಕಾರಕ್ಕೆ ಉದಾಹರಣವಾಗಿರುವುದು. ಇದರಲ್ಲಿ ಇನ್ನೂ ಅನೇಕಾರ್ಥಗಳು ಹೊಳೆಯುವುವು.

(ಸುತ್ತಲೂ ನೋಡಿ) ನಾನು ಬಿನ್ನವಿಸೆ ತವಕಗೊಂಡಿರುವಲ್ಲಿ ಯಾರೋ ಶಬ್ದಮಾಡುವಂತಿದೆ ! ಅಯ್ಯಾ ! ಇದೇನೋ ನೋಡಿ ತಿಳಿಯುವೆನು.

(ತೆರೆಯಲ್ಲಿ)

ಆಹಾ ! ಕುರುರಾಜನ ಯಜ್ಞವೈಭವವನ್ನು—

ಸೂತ್ರ—ಆಹಾ ! ಅರ್ಥವಾಯಿತು.

ಕುರುರಾಜನಾದ ದುರ್ಯೋಧನನು ಯಜ್ಞದೀಕ್ಷೆಯನ್ನು ಕೈಕೊಂಡಿರುವನು. ಪೃಥಿವಿಯ ಅರಸರೆಲ್ಲರೂ ಯಜ್ಞದರ್ಶನ ಕುತೂಹಲದಿಂದ ತಂತಮ್ಮ ಅಂತಃಪುರ ಪರಿವಾರದೊಂದಿಗೆ ಬಿಜಮಾಡಿಸಿರುವರು.

(ಎಂದು ತೆರಳುವನು.)

ಇಂತಿದು ಸ್ಥಾಪನೆ.

(ಮೂವರು ಬ್ರಾಹ್ಮಣರು ಪ್ರವೇಶಿಸಿ)

ಮೂವರೂ—ಆಹಾ ! ಕುರುರಾಜನ ಯಜ್ಞವೈಭವವನ್ನು ಏನೆಂದು ಬಣ್ಣಿಸುವ !

ಮೊದಲನೆ—ಬ್ರಾಹ್ಮಣರು ತಿಂದು, ತೇಗಿ, ಎಂಜಲಿನಲ್ಲಿ ಬಿಸುಟ ಅನ್ನರಾಶಿಯು ದಿಕ್ಕುದಿಕ್ಕಿನಲ್ಲಿಯೂ ಕಾಚಿಯ ಹೂಗೊಂಚಲಿನಂತೆ ಕಂಡುಬರುವುದು. ಅಗ್ನಿಯಲ್ಲಿ ಹೋಮಮಾಡಿದ ಆಹುತಿಗಳ ಧೂಮವು ಗಿಡ, ಮರ, ಬಳ್ಳಿಗಳ ಹೂಗೊಂಚಲಿನ ವಾಸನೆಯನ್ನು ಅಪಹರಿಸಿರುವುದು. ಹುಲಿಗಳು ಪಳಗಿದ ಜಿಂಕೆಗಳಂತೆ ಇರುವುವು. ಯಾವ ಬೆಟ್ಟದಲ್ಲಿ ನೋಡಿದರೂ ಗವಿಗಳೊಳಗಣ ಸಿಂಹಗಳೆಲ್ಲಾ ಕೊಲ್ಲಲ್ಪಟ್ಟಿರುವುವು. ರಾಜಾಧಿರಾಜನೆನಿಸಿದ ದುರ್ಯೋಧನನು ದೀಕ್ಷೆಯನ್ನು ಕೈಗೊಂಡುದನ್ನು ಕಂಡು ಲೋಕವೂ ದೀಕ್ಷಿತವಾಗಿರುವಂತೆ ಕಾಣುವುದು.

ಎರಡನೆ—ಭಲಾ ! ಚೆನ್ನಾಗಿ ಹೇಳಿದೆ.

ದೇವತೆಗಳ ದೂತನಾದ ಅಗ್ನಿಯು ಆಹುತಿಗಳಿಂದ ತೃಪ್ತಿಗೊಂಡನು. ಭೂಸುರರು ವಿಶೇಷವಾದ ದ್ರವ್ಯವನ್ನು ಪಡೆದು ಸಂತಸ

ಗೊಂಡರು. ಪಕ್ಷಿಗಳೂ, ಗೋವುಗಳೂ, ಇತರ ಪಂಗಡದವರೂ ತೃಪ್ತರಾದರು. ಇಂತು ಲೋಕದಲ್ಲೆಲ್ಲಾ ದುರ್ಯೋಧನನ ಸದ್ಗುಣ ಸಂಪತ್ತಿಯನ್ನು ಕೊಂಡಾಡಿ, ಈ ಜಗವು, ದೇವಲೋಕದಲ್ಲಿಯೂ ರಾಜನ ಕೀರ್ತಿಯನ್ನು ಹರಡಲು ದೇವತೆಗಳ ಮಂದಿರವನ್ನು ಹೊಕ್ಕಿರುವುದೋ ಎಂಬಂತೆ ಕಾಣುವುದು.

ಮೂರನೆ—ಹೀಗೆಯೇ ಸರಿ. ಇದರ ಸಮಾಚಾರವೇ ಇಷ್ಟು. ಇತ್ತ ನೋಡಿರಿ; ದ್ವಿಜರು—

ನರಪಾಲಕರ ಆದರಪೂರ್ವಕವಾದ ನಮಸ್ಕಾರ, ಸತ್ಕಾರ, ಪ್ರಶಂಸೆಗಳಿಂದ ಸಂತುಷ್ಟರೆನಿಸಿ, ಅನುದಿನವೂ ವೇದವನ್ನೇ ಅಧ್ಯಯನ ಮಾಡುವಿಕೆಯೆಂಬ ಯುದ್ಧದಲ್ಲಿ ಶೂರತಮವೆನಿಸಿದ ಬಾಯಿಯಿಂದೊಪ್ಪುತ್ತಾ, ಮುದಿತನದಲ್ಲಿಯೂ ತಂತಮ್ಮ ನಿಯಮಗಳನ್ನು ತಪ್ಪದೆ ನಡೆಯಿಸುತ್ತಾ, ಮುಪ್ಪಿನಿಂದ ಶಕ್ತಿಯು ಕುಗ್ಗಿ, ಸೊಂಟವು ಬಗ್ಗಿರುವುದರಿಂದ ಕಯ್ಯಲ್ಲಿ ಕೋಲನ್ನು ಹಿಡಿದು, ನೆಲದ ಮೇಲೆ ಊರಿ, ಅದರ ಆಸರೆಯಿಂದಲೂ ಮತ್ತು ಶಿಷ್ಯರ ಹೆಗಲಿನ ಮೇಲೆ ತಮ್ಮ ಮಡಿಚೀಲವನ್ನು ಹೊರಿಸಿ, ಅವರ ಭುಜದ ಆಸರೆಯಿಂದಲೂ ವೃದ್ಧಬ್ರಾಹ್ಮಣರು ಮುದಿಯಾನೆಗಳಂತೆ ಮೆಲ್ಲಮೆಲ್ಲಗೆ ನಡೆಯುತ್ತಿರುವರು.

ಮೂವರೂ—ಎಲಾ ! ಹುಡುಗರೇ ; ಬಾಲರೇ ! ಇನ್ನೂ ದೀಕ್ಷಾಸಮಾಪ್ತಿ ಸೂಚಕವಾದ ಅವಭೃಥ ಸ್ನಾನವು ಪೂರೈಸಲಿಲ್ಲವಾಗಿ, ನೀವು ಈಗಲೇ ಯಜ್ಞಪುರುಷನನ್ನು ಶಾಂತಿಗೊಳಿಸಬೇಡಿರಿ. ಸ್ವಲ್ಪ ತಡೆಯಿರಿ.

ಮೊದಲನೆ—ಛೀ ! ಛೀ ! ! ನಾವಿಷ್ಟು ಬಗೆಯಿಂದ ಕೂಗಿ ಹೇಳಿದರೂ ಈ ಬ್ರಹ್ಮಚಾರಿಗಳು ತಮ್ಮ ಚಾಪಲ್ಯವನ್ನು ತೋರಿಸಿಯೇ ಮುಗಿದರು.

ಕಂಗೊಳಿಸುವ ಈ ಯೂಪಸ್ತಂಭವು ಭೂದೇವಿಯ ಕನಕಮಯವಾದ ಭುಜವೋ ಎಂಬಂತೆ ಮನೋಹರವಾಗಿ ಕಾಣುವುದು. ದ್ವಿಜನು ವೃಷಲನನ್ನು ಪಕ್ಕದಲ್ಲಿ ಕೂಡಿರಿಸುವುದಕ್ಕೆ ಸಮ್ಮತಿಸ

ದಂತೆ ಚಯನಸಿದ್ಧವಾದ ಅಗ್ನಿಯು ಲೌಕಿಕಾಗ್ನಿಯನ್ನು ಹತ್ತಿರಬ ರಗೊಳಿಸದು. ಅಗ್ನಿಕುಂಡದ ಸುತ್ತಲೂ ಹಸಿಯ ದರ್ಭೆಯನ್ನು ಹರಡಿರುವುದರಿಂದ ಮೇಲುಭಾಗದ ಸುತ್ತಿನ ಮಣ್ಣು ಇನ್ನೂ ತೇ ಮವಾಗಿಯೇ ಇರುವುದು. ಅರಳಿದ ತಾವರೆಯ ಕೊಳವನ್ನು ಆನೆ ಯು ಹುಗುವಂತೆ ಹೋಮಧೂಮವು "ಪ್ರಾಗ್ವಂಶ" ವೆಂಬ (ಮತ್ತೊಂದು) ಯಜ್ಞಶಾಲೆಯನ್ನು ಪ್ರವೇಶಿಸುತ್ತಿರುವುದು.

ಎರಡನೆ—ಸರಿ, ಸರಿ, ಚೆನ್ನಾಗಿದೆ. ಇದು ಹೀಗೆಯೇ ಸರಿ. ಧರ್ಮವಿರುದ್ಧ ವಾದ ನಡವಳಿಕೆಯಿಂದ ಬಹಿಷ್ಕೃತನಾದವನು ತನ್ನ ನಂಟರನ್ನು ಕಂಡು ತಾನಾಗಿಯೇ ಹಿಂದಿರುಗಿಹೋಗುವಂತೆ ಅಗ್ನಿ ಜ್ವಾಲೆಗೆ ಹೆದ ರಿದ ದ್ವಿಜರು ವೈದಿಕಾಗ್ನಿಯನ್ನು ಬೆಂಕಿಯೆಂಬ ಭಯದಿಂದ ದೂರ ದಲ್ಲಿಯೇ ನೋಡಿ ಹಿಂದಿರುಗುವರು.

ಮೂರನೆ—ತುಪ್ಪದಿಂದ ತುಂಬಿದ 'ಶಕಟ' ಎಂಬ ಯಜ್ಞಸಾಧನವಾದ ಪಾತ್ರೆಯು, ಹೊಟ್ಟೆಯಲ್ಲಿ ಹುಟ್ಟಿದ ಮಗುವು ಸತ್ತಮೇಲೆ ಆ ಕೂಸಿನ ಬಾಲಚೇಷ್ಟೆಗಳನ್ನು ನೆನೆಸಿ, ವಾತ್ಸಲ್ಯದಿಂದ ಬಿಕ್ಕಿ ಬಿಕ್ಕಿ ಅಳುವ ಹೆಂಗಸಿನ ತೆರದಿಂದೆ, ಉರಿಯತೊಡಗಿರುವುದು. ಮೇಲೆ ನೀರೆರಚಿದಷ್ಟೂ ಅದರ ಜ್ವಾಲೆಯು ಮತ್ತಷ್ಟು ಹೆಚ್ಚುತ್ತಿರು ವುದು.

ಮೊದಲನೆ—ಭಲಾ ! ಬಹಳ ಯುಕ್ತವಾಗಿ ನಿರೂಪಿಸಿರುವೆ.

ಚಕ್ರವರ್ತಿಯಾದ ದುರ್ಯೋಧನನ ಧರ್ಮಶಕಟಿಯನ್ನು ಸುಡತೊ ಡಗಿದ ಬೆಂಕಿಯು, ಸುತ್ತಲೂ ಹಾಸಿರುವ ದರ್ಭೆಯು ಹಸುರಾಗಿರು ವುದರಿಂದ ಅಲ್ಲಿ ತನ್ನ ಜ್ವಾಲೆಯನ್ನು ಹರಡಲಾರದೆ ಕುಗ್ಗಿ, ಉರಿ ಯೂ ಕಡಮೆಯಾಗಿರುವುದು. ಈಗ ಬೆಂಕಿಯ ಶಾಕದಿಂದ ದರ್ಭೆ ಯು ಸ್ವಲ್ಪ ಬಣಗಿದಂತಾಗಿರುವುದರಿಂದ ಅಗ್ನಿಯ ವೇಗವು ಸ್ವಲ್ಪ ಹೆಚ್ಚಿ, ಗಾಳಿಯೂ ಅನುಕೂಲವಾಗಿ ಬೀಸಿದ ಕಾರಣ, ಜ್ವಾಲೆಯು ಬಲವಾಗಿ, ಗಿರ್ರನೆ ಗುಂಡಾಗಿ ತಿರುಗುತ್ತಾ, ಚಕ್ರಾಕಾರವನ್ನು ತಳೆದು ಸೂರ್ಯನಂತೆ ಕಂಗೊಳಿಸುವುದು.

ಎರಡನೆ—ಇದೊಂದು ವಿಚಿತ್ರವು, ನೋಡಿರಿ.

ಹತ್ತಿರದಲ್ಲಿರುವ ಹುತ್ತಕ್ಕೆ ಅಗ್ನಿಯ ಜ್ವಾಲೆಯು ಸೋಕಿದ ಕಾರಣ ಬಳಗಿದ್ದ ಐದು ಸರ್ಪಗಳೂ ಏಕಕಾಲದಲ್ಲಿಯೇ ಪೊಟರೆಯಿಂದ ಹೊರಗೆ ಬಂದು, ಮೃತಪಟ್ಟ ಅರಸನ ದೇಹದಿಂದ ಸಮಕಾಲದಲ್ಲಿಯೇ ಹೊರಗೆ ಬರುವ ಐದು ಇಂದ್ರಿಯಗಳೋ ಎಂಬಂತೆ ಕಂಗೊಳಿಸುವುವು.

ಮೂರನೆ—ಇದು ಮತ್ತೊಂದು ಆಶ್ಚರ್ಯವು.

ಗಾಳಿಯು ಅನುಕೂಲವಾಗಿ ಬೀಸುವ ಕಾರಣ, ಹೋಮಕುಂಡದ ಅಗ್ನಿಯ ಜ್ವಾಲೆಯು ಮೇಲೆ ಮೇಲೆ ಹೆಚ್ಚಿ, ಬಳಿ ಇದ್ದ ಗಿಡವು ಉರಿಯತೊಡಗಿರುವುದು. ಆ ಗಿಡದ ಪೊಟರೆಯಲ್ಲಿದ್ದ ಹಕ್ಕಿಗಳು, ಉತ್ಕ್ರಮಣ ಕಾಲದಲ್ಲಿ ದೇಹದಿಂದ ಹೊರಬರುವ ಪಂಚಪ್ರಾಣ ವಾಯುಗಳಂತೆ ಹಿಂಸೆಪಟ್ಟು ಹೊರಬರುತ್ತಿರುವುವು.

ಮೊದಲನೆ—ಯಾವನಾದರೊಬ್ಬನು ತನ್ನ ಚಾರಿತ್ರವು ಭ್ರಷ್ಟವಾಗುವಿಕೆಯಿಂದ ಅವನ ಕುಲವೆಲ್ಲವೂ ಲೋಕದಲ್ಲಿ ಅಪಖ್ಯಾತಿಗೆ ಗುರಿಯಾಗುವಂತೆ, ಬಣಗಿನಿಂತಿದ್ದ ಈ ಒಂದು ಮರವು ಉರಿಯಲಾರಂಭಿಸಿ, ಅದರ ಬೇಗೆಯಿಂದ ಸುತ್ತಮುತ್ತಲೂ, ಹೂ, ಕಾಯಿ, ಹಣ್ಣುಗಳಿಂದ ತುಂಬಿದ್ದ ಹಸುರು ಗಿಡಗಳಿಂದ ಮನೋಹರವಾದ ವನವೆಲ್ಲವೂ ಉರಿಯತೊಡಗಿರುವುದು.

ಯಜ್ಞಪುರುಷನೆಂಬ ದ್ವಿಜವರ್ಯನು, ಗಿಡ, ಮರ, ಬಳ್ಳಿಗಳಿಂದ ತುಂಬಿ ಕಂಗೊಳಿಸುತ್ತಿದ್ದ ಈ ವನವೆಂಬ ಮೃಷ್ಟಾನ್ನವನ್ನು ಸಮೃದ್ಧಿಯಾಗಿ ತಿಂದು, ತೇಗಿ, ವೇಗವಾಗಿ ನಡೆಯುವುದಕ್ಕೂ ಕಯ್ಯಲ್ಲಾಗದವನಂತೆ ಉರಿಯು ಕಡಮೆಯಾಗಿರುವುದರಿಂದ, ಭೋಜನವಾದ ಮೇಲೆ ಕೈ, ಕಾಲು, ಬಾಯಿಯನ್ನು ತೊಳೆದುಕೊಂಡು ಶುದ್ಧಾಚಮನವನ್ನು ಮಾಡುವುದಕ್ಕಾಗಿ ನೀರನ್ನು ಬಯಸಿ ನದಿಯನ್ನು ಕುರಿತು ಹೊರಟಿರುವನೋ ಎಂಬಂತೆ ಮೆಲ್ಲಮೆಲ್ಲಗೆ ನದಿಯ ದಡವನ್ನು ಸೇರಿರುವನು.

ಎರಡನೆ—ಇಲ್ಲಿ ನೋಡಿರಿ. ಇಲ್ಲಿ, ಇಲ್ಲಿ, ವಿಶಾಲವಾಗಿ ಸುತ್ತಲೂ ಬೆಳೆದು ಹರಡಿರುವ ನೊದೆಯ ಹುಲ್ಲೆಂಬ ನಾರುಮಡಿಯನ್ನು ಉಟ್ಟು, ಪರಿ

ಶುದ್ಧನಾದ ಅಗ್ನಿಯು ಮರದಿಂದ ಮರಕ್ಕೆ ದಾಟುಹಾಕಿ ನಡೆಯುತ್ತಾ ಇರುವನು. ಬಾಳೆಯ ಗೊಂಚಲಿನಿಂದ ಕಳುವಾಗಿದ ಹಣ್ಣುಗಳಂತೆ ಬೆಂಕಿಯ ಶಾಕದಿಂದ ಪಕ್ವವಾದ ಕಾಯಿಗಳು ತೊಟ್ಟು ಕಳಚಿ ಕೆಳಗೆ ಬೀಳುತ್ತಿರುವುವು. ಬುಡವು ಹತ್ತಿ, ಉರಿಯುತೊಡಗಿ, ಬೇರುಗಳು ಸಡಲಬಿದ್ದ ಕಾರಣ, ಈ ತಾಳೆಯ ಮರವು ತುದಿಯಲ್ಲಿರುವ ಜೇನುಗೂಡಿನೊಂದಿಗೆ, ಪರಮೇಶ್ವರನ ಪರಶುವೆಂಬ ಆಯುಧವೋ ಎಂಬಂತೆ ಮುರಿದು ಕೆಳಗೆ ಬಿದ್ದಿತು.

ಮೂರನೆ—ಅಬ್ಬಬ್ಬಾ ! ಸಿಟ್ಟುಗೊಂಡ ಸತ್ಪುರುಷನಂತೆ, ಅಗ್ನಿಪುರುಷನು ತಾನಾಗಿಯೇ ಶಾಂತನಾದನು. ಕಯ್ಯಲ್ಲಿದ್ದ ದ್ರವ್ಯವನ್ನೆಲ್ಲಾ ಮನಸ್ಸು ಬಂದಂತೆ ದಾನಮಾಡಿದ ಬಳಿಕ, ವೈಭವವೆಲ್ಲವೂ ಕಡಮೆಯಾಗಿರುವಲ್ಲಿ, ಉದಾರಸ್ವಭಾವವುಳ್ಳ ತ್ಯಾಗಿಯ ದಾನಶಕ್ತಿಯೂ ಬರುತ ಬರುತ ಇಳಿಯುವಂತೆ ಇಂಧನವಿಲ್ಲದ ಪ್ರಯುಕ್ತ ಯಜ್ಞಪುರುಷನ ಬಲವೆಲ್ಲವೂ ಅಣಗಿಹೋಯಿತು.

ಮೊದಲನೆ—ಚೆನ್ನಾಗಿ ಬದುಕಿ, ಸುಖವಾಗಿ ಬಾಳಿದ ಮನುಷ್ಯನು ತನಗೆ ಸಂಕಟವೊದವಿ ತಿನ್ನುವುದಕ್ಕೂ ಗತಿಯಿಲ್ಲದ ಕಾಲದಲ್ಲಿ ತನ್ನ ಪರಿವಾರದವರಲ್ಲಿಯೇ ತಿರಿದು ಹೊಟ್ಟೆ ಹೊರೆದುಕೊಳ್ಳುವಂತೆ, ಇದುವರೆಗೂ ಸಹಿಸಲಾಗದ ತೆರದಿಂದೆ ಜಾಜ್ವಲ್ಯಮಾನನೆನಿಸಿ ಉರಿಯುತ್ತಿದ್ದ ಅಗ್ನಿಯು ಈಗ ತನಗೆ ಆಹುತಿಯು ದೊರೆಯದಿರುವ ಕಾರಣ, ಯಜ್ಞಸಾಧನಗಳೆನಿಸಿದ, ಸ್ರುಕ್ಕು, ಸ್ರುವ, ಮುಂತಾದ ಮರದ ಪಾತ್ರೆಗಳು, ಅಗ್ನಿಯನ್ನು ಕಡೆದು ತೆಗೆಯುವ ಅರಣಿ, ದರ್ಭೆ ಇವುಗಳನ್ನೇ ಸುಡತೊಡಗಿರುವುದು.

ಎರಡನೆ—ಗಾಳಿಯಿಂದ ನೆಲದವರೆಗೂ ಬಾಗಿ, ಗಾಳಿಯಿಲ್ಲದ ವೇಳೆಯಲ್ಲಿ ಮೇಲಕ್ಕೆ ಎದ್ದು ನಿಲ್ಲುವ ಈ ಬಿದುರು ಮೆಳೆಗಳು ಪುರುಷರ ಭಾಗ್ಯಗಳಂತೆ ಬಾರಿಬಾರಿಗೂ ಕೆಳಗೆ ಬಾಗಿ, ಮೇಲೆ ಏಳುತ್ತಿರುವುವು.

ಮೂರನೆ—ಭಲಾ ! ಚೆನ್ನಾಗಿ ನಿರೂಪಿಸಿದೆ.

ಸತ್ಕುಲಪ್ರಸೂತನಾದ ಸಜ್ಜನನು, ದುಷ್ಕುಲಪ್ರಸೂತೆಯಾದ ಹೆಂಡತಿಯ ಸಂಪರ್ಕದಿಂದ ಹಗಲಿರುಳೂ ಮನಮರುಗುವಂತೆ ಬಣಗಿದ

ಬಳ್ಳಿಯು ಸುತ್ತಿಕೊಂಡಿದ್ದುದರಿಂದ ಈ ಹಸುರು ಮರವೂ ಸುಟ್ಟು ಹೋಗುತ್ತಿರುವುದು.

ಎರಡನೆ—ನದಿಯ ದಡದಲ್ಲಿ ಬೆಳೆದು ನೀರಿನ ಕಡೆ ಬಾಗಿರುವ ಈ ಗಿಡದ ಎಲೆಗಳೆಲ್ಲವೂ ಉದುರಿ, ಒಂದೇ ಒಂದು ಎಲೆಯು ತಗುಲಿಕೊಂಡಿರುವುದು. ಗಾಳಿಯಿಂದ ಆ ಎಲೆಯು ಅಲ್ಲಾಡುತ್ತಿರುವುದನ್ನು ನೋಡಿದರೆ, ಕಾಳ್ಗಿಚ್ಚಿನ ಬಾಧೆಗೆ ಸಿಲುಕಿ ಮಡಿದ ತನ್ನ ಜ್ಞಾತಿಗಳೆನಿಸಿದ ಗಿಡ, ಮರ ಮುಂತಾದವುಗಳಿಗೆ ನದಿಯಿಂದ ನೀರನ್ನು ತೆಗೆದು, ತಿಲೋದಕವನ್ನು ಕೊಡುತ್ತಿರುವುದೋ ಎಂಬಂತೆ ಕಾಣುವುದು.

ಮೂರನೆ—ಬನ್ನಿರಿ. ನಾವೂ ಇನ್ನು ಸ್ನಾನ, ಸಂಧ್ಯೆ ಮೊದಲಾದ ನಮ್ಮ ನಿತ್ಯಕರ್ಮಗಳನ್ನು ನೆರವೇರಿಸಲು ನದಿಯನ್ನೇ ಸೇರುವ.

ಇಬ್ಬರೂ—ಒಳ್ಳೆಯದು. (ಮೂವರೂ ತಮ್ಮ ನಿಯಮಗಳನ್ನು ನಡೆಯಿಸಿ)

ಮೊದಲನೆ—ಅಗೋ ! ಮಹಾಮಹಿಮನಾದ ಕುರುಕುಲ ಸಾರ್ವಭೌಮನೆನಿಸಿದ ದುರ್ಯೋಧನನು ಭೀಷ್ಮದ್ರೋಣರೊಡಗೂಡಿ, ಸಕಲ ನರಪಾಲಕರೊಂದಿಗೆ ಈ ಕಡೆಯೇ ಬಿಜಮಾಡಿಸುತ್ತಿರುವನು. ಇವನ ಸುತ್ತಲೂ ಪೌರಜಾನಪದರೆಲ್ಲರೂ ಗುಂಪುಕೂಡಿ,—

"ಇಂತೆಯೇ ನೂರಾರು ಯಜ್ಞಗಳನ್ನು ನಡೆಯಿಸಿ, ಸುಖದಿಂದ ಭೂಮಿಯನ್ನು ಪರಿಪಾಲಿಸು. ನಿನ್ನ ಪರಾಕ್ರಮದಿಂದ ಭೂಮಂಡಲದ ಅರಸರನ್ನೆಲ್ಲಾ ಗೆಲ್ಲು. ರೋಷವನ್ನು ತೊರೆ. ಬಂಧುಬಳಗಗಳಲ್ಲಿ ಯಾವಾಗಲೂ ದಯಾದಾಕ್ಷಿಣ್ಯಗಳನ್ನು ತೋರು. ಹೇಗಾದರೂ ಮಾಡಿ ಪಾಂಡವರನ್ನು ಮಾತ್ರ ಕಯ್ಯಲಾಗದವರೆಂದು ಅಲಗಳೆಯದೆ ಹತ್ತಿರ ಬರಮಾಡಿಕೊಳ್ಳು" ಎಂದು ಮುಂತಾದ ಮಾತುಗಳನ್ನು ಮೃದುಮಧುರ ರೀತಿಯಿಂದೆ ಉಗ್ಗಡಿಸುತ್ತಾ, ಪಾಂಡವರನ್ನು ಬರಮಾಡಿಕೊಳ್ಳುವ ಉಪಾಯವನ್ನೇ ಹುಡುಕುತ್ತಿರುವರು. ಬನ್ನಿರಿ. ನಾವೂ ಕುರುರಾಜನ ಸಭೆಯನ್ನೇ ಸೇರುವ !

ಇಬ್ಬರೂ—ಒಳ್ಳೆಯದು.

ಮೂವರೂ—ಅಯ್ಯಾ ! ರಾಜಾಧಿರಾಜನೆನಿಸಿ ಸುಖದಿಂದ ಬಾಳು.

(ಎಂದೆಲ್ಲರೂ ತೆರಳುವರು)

## ವಿಷ್ಕಂಭಕವು.

---

(ಭೀಷ್ಮ-ದ್ರೋಣರ ಪ್ರವೇಶ.)

ದ್ರೋಣ—ದುರಾತ್ಮನಾದ ದುರ್ಯೋಧನನು ಇಷ್ಟೊಂದು ಧರ್ಮಕಾರ್ಯವನ್ನು ನಡೆಯಿಸುವನೆಂದು ಯಾರು ತಿಳಿದಿದ್ದರು ? ಇದರಿಂದ ನನಗೇನಾದರೂ ಲೇಶಮಾತ್ರವಾದರೂ ಫಲವುಂಟೇ ? ಯಾರಿಗೋ ಏನೇನನ್ನೋ ! ಅವರವರು ಕೋರಿದುದನ್ನೆಲ್ಲಾ ಎಲ್ಲರಿಗೂ ಕೊಟ್ಟು ಸಂತುಷ್ಟನ ಗಿರುವನಂತೆ! ನನಗೆ ಬಂದ ಲಾಭವೇನು ? ಏಕೆಂದರೆ:—

ಸಾವಿರಾರು ಮಂದಿ ನಂಟರೂ, ಇಷ್ಟರೂ, ಆಪ್ತರೂ ಇರುತ್ತಿದ್ದರೂ, ನೂರಾರು ಮಂದಿ ಅಂತರಂಗ ಮಿತ್ರರಿದ್ದರೂ, ಶಿಷ್ಯನು ಮಾಡುವ ದೋಷವನ್ನೆಲ್ಲಾ ಲೋಕವು ಗುರುವಿನ ತಲೆಯ ಮೇಲೆಯೇ ಹೊರಿಸುವುದಲ್ಲಾ ! ಹೆತ್ತ ತಾಯಿತಂದೆಗಳಾದರೋ ಚಿಕ್ಕ ವಯಸ್ಸಿನಲ್ಲಿಯೇ ತಮ್ಮ ಮಗನನ್ನು ಗುರುವಿಗೆ ಸಮರ್ಪಿಸುವ ಕಾರಣ, ಅವರ ತಲೆಯ ಮೇಲಂತೂ ಯಾವ ವಿಧವಾದ ಅಪರಾಧವನ್ನೂ ಹೊರಿಸುವುದಕ್ಕೂ ಅವಕಾಶವೇ ಇಲ್ಲವಷ್ಟೆ.

ಭೀಷ್ಮ—ಕ್ರೂರವೃತ್ತಿಯನ್ನು ಕೈಕೊಂಡು, ಬಗೆಬಗೆಯಿಂದ ಜನರನ್ನು ಗೋಳಾಡಿಸಿ, ಕಪ್ಪುಕಾಣಿಕೆಗಳ ರೂಪವಾಗಿ ಲೋಕವನ್ನೆಲ್ಲಾ ಸೂರೆಗೊಂಡು, ಏಳಿಗೆಯನ್ನು ಪಡೆದು, ಅನುದಿನವೂ ರಣರಂಗದಲ್ಲಿಯೇ ಆಸಕ್ತಿಯನ್ನಿರಿಸಿದವನಾದುದರಿಂದ ಅಪಕೀರ್ತಿಗೆ ಗುರಿಯಾಗಿದ್ದರೂ, ಪುಣ್ಯಸಂಪಾದಕವಾದ ಈ ಯಜ್ಞರೂಪವಾದ ಧರ್ಮಕಾರ್ಯವನ್ನು ನೆರವೇರಿಸಿದ ಕಾರಣ, ಈಗ ಅವನೇ ಎಷ್ಟೋ ಸೌಮ್ಯನಂತೆ ಮನೋಹರವಾಗಿ ಕಂಡುಬರುವುದು ಅತ್ಯಾಶ್ಚರ್ಯಕರವಾದುದು.

(ದುರ್ಯೋಧನನು ಕರ್ಣ, ಶಕುನಿಗಳೊಡನೆ ಪ್ರವೇಶಿಸಿ)

ದುರ್ಯೋಧನ—ನನ್ನ ಅಂತರಂಗವು ಶ್ರದ್ಧೆಯಿಂದ ತುಂಬಿರುವುದು. ಗುರು ಹಿರಿಯರೆಲ್ಲರೂ ಹಿಗ್ಗುತ್ತಿರುವರು. ಲೋಕವೆಲ್ಲವೂ ನನ್ನ ವಿಷಯದಲ್ಲಿ ಹೆಚ್ಚಿನ ವಿಶ್ವಾಸವನ್ನು ಇರಿಸತೊಡಗಿರುವುದು. ಇದೇ ಸುಗುಣಸಂಪತ್ತಿಯೇ ಇನ್ನು ಮೇಲೆ ನನ್ನಲ್ಲಿ ಸ್ಥಿರವಾಗಿರುವುದು. ನನ್ನ ಅಪಕೀರ್ತಿಯೆಲ್ಲವೂ ಮಾಯವಾಯಿತು. ಸ್ವರ್ಗವು ಸತ್ತ ಮೇಲೆ ಲಭಿಸುವುದೆಂದು ಹೇಳುವುದು ಮರುಳರ ಮಾತು. ಛೀ, ಛೀ, ಇದೆಲ್ಲಾ ಸುಳ್ಳು. ಇದಕ್ಕಿಂತಲೂ ಬೇರೆಯಾದ ಸ್ವರ್ಗವೂ ಬಂದಿರುವುದೇ? ಹಾಗೆ ಇದ್ದುದೇ ದಿಟವಾದರೆ, ಅದು ಎಂದಿಗಾದರೂ ಕಣ್ಣಿಗೆ ಕಾಣದಿರುವುದೇ! ಈಗಲೇ ಬಗೆ ಬಗೆಯಾಗಿ ನನ್ನ ಸುಕೃತದ ಫಲವು ಕಂಡುಬರುತ್ತಿದೆಯಲ್ಲವೆ? ಪ್ರತ್ಯಕ್ಷ ಫಲದಾಯಕವೆನಿಸಿದ ಯಜ್ಞವು ಎಂದಿಗಾದರೂ ಪರೋಕ್ಷ ಫಲದಾಯಕವಾಗುವುದೇ?

ಕರ್ಣ—ಗಾಂಧಾರೀತನಯನೆ! ನ್ಯಾಯವಾಗಿ ಸಂಪಾದಿಸಿದ ಹಣವನ್ನು ಯೋಗ್ಯವಾದ ಧರ್ಮಕಾರ್ಯದಲ್ಲಿ ವಿನಿಯೋಗಿಸಿದೆಯಾದುದರಿಂದ ನಿನ್ನ ಪ್ರಯತ್ನವು ಸಾರ್ಥಕವಾದುದು. ಏತಕ್ಕೆಂದರೆ:— ಅರಸರ ಏಳಿಗೆಯು ಅಂಬಿನ ಆಸರೆಯಲ್ಲಿರುವುದು. ಇಂತು ಬಾಣಬಲದಿಂದ ಗಳಿಸಿದ ಹಣವನ್ನು ಮಕ್ಕಳ ಸಲುವಾಗಿ ಬಚ್ಚಿಡುವವನಿಗೆ ಇಹಪರಗಳೆರಡೂ ಇಲ್ಲದೆ, ಅವನು ತನ್ನನ್ನು ತಾನೇ ವಂಚಿಸುವನು. ರಾಜ್ಯಾಧಿಕಾರದಲ್ಲಿ ನಿಯುಕ್ತನಾದ ಅರಸನು ಧರ್ಮಮಾರ್ಗದಿಂದ ಸಂಪಾದಿಸಿದಹಣವನ್ನೆಲ್ಲಾ ಭೂಸುರರ ಅಧೀನವಮಾಡಿ, ಮಕ್ಕಳಿಗೆಬಿಲ್ಲು ಹೊರತು ಮತ್ತೇನನ್ನೂ ಕೂಡಿಸಿಟ್ಟು ಕೊಡಬಾರದು.

ಶಕುನಿ—ಭಲಾ! ಗಂಗಾತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಅಂಗರಾಜನ ಪಾಪವೆಲ್ಲವೂ ಲೀನವಾಗಿ, ಚಿತ್ತವೃತ್ತಿಯು ಪ್ರಸನ್ನತೆಯನ್ನು ಪಡೆದಿರುವುದೆಂದು ಊಹಿಸುವೆನು. ಇಲ್ಲದಿದ್ದರೆ ಇಂತಹ ಮಾತೂ ಇವನ ಬಾಯಿಯಿಂದಲೂ ಹೊರಡುತ್ತಿದ್ದಿತೇ?

ಕರ್ಣ—ಇಕ್ಷ್ವಾಕು, ಶರ್ಯಾತಿ, ಯಯಾತಿ, ರಾಮ, ಮಾಂಧಾತೃ, ನಾಭಾಗ, ನೃಗ, ಅಂಬರೀಷ ಮುಂತಾದ ಸಾರ್ವಭೌಮರು ತಮ್ಮ ಬೊಕ್ಕಸ, ಅರಮನೆ, ಸೇವಕರು, ಪಟ್ಟಣ ಮತ್ತು ದೇಶದ ಜನರು, ಆಳ್ವಿಕೆಗೆ ಒಳಪಟ್ಟಿದ್ದ ದೇಶಗಳೊಂದಿಗೆ ಪಾಂಚಭೌತಿಕವಾದದೇಹವನ್ನು ಪರಿತ್ಯಜಿಸಿ, ಲೋಕಾಂತರವನ್ನು ಸೇರಿ, ಎಷ್ಟೋ ಸಾವಿರ ವರ್ಷಗಳಾದರೂ, ಅವರು ಮಾಡಿದ ಧರ್ಮದಿಂದೊಡಗೂಡಿದ ಯಜ್ಞಾನುಷ್ಠಾನಜನಿತವಾದ ಕೀರ್ತಿಯೆಂಬ ದೇಹದಿಂದಇನ್ನೂ ಈ ಲೋಕದಲ್ಲಿ ಜೀವಿಸಿರುವರಲ್ಲವೇ ?

ಎಲ್ಲರೂ—ಗಾಂಧಾರಿಯ ಕುವರನೆ ! ದೈವಯೋಗದಿಂದ ನಿನ್ನ ಇಷ್ಟಾನುಸಾರ ಯಜ್ಞಕರ್ಮವು ಸಮಾಪ್ತವಾದುದುನಿನಗೆ ಪರಮಾನಂದದಾಯಕವೆಂದು ಭಾವಿಸುವೆವು. ಇಂತೆಯೇ ಶಾಶ್ವತವಾಗಿ ಧರ್ಮಕಾರ್ಯಗಳನ್ನು ಕೈಕೊಳ್ಳು.

ದುರ್ಯೋ—ಧನ್ಯನಾದೆನು. ಅನುಗೃಹೀತನಾದೆನು. ನನ್ನ ಜನ್ಮವು ಸಾರ್ಥಕವಾಯಿತು. ಗುರುವರೇಣ್ಯನೆ ! ಅಭಿವಾದನಗೈವೆನು.

ದ್ರೋಣ—ಪುತ್ರಾ ! ಇದು ಕ್ರಮವಲ್ಲ. ನ್ಯಾಯುವೂ ಅಲ್ಲ. ಇತ್ತಬಾ.

ದುರ್ಯೋ—ಹಾಗಾದರೆ ಕ್ರಮವು ಯಾವುದೋ ಅರಿಯೆನಲ್ಲಾ !

ದ್ರೋಣ—ಇದೇನು ! ಹೀಗೆನ್ನುವೆ ?

ಕಾರಣಾಂತರದಿಂದ ಭೂಲೋಕದಲ್ಲಿ ಅವತಾರಮಾಡಿರುವ ದೈವಾಂಶಸಂಭೂತನಾದ ಈ ಮಹಾಮಹಿಮನನ್ನು ಮೊದಲು ನಮಸ್ಕರಿಸು. ಭೀಷ್ಮನು ಇದಿರಾಗಿರುವಲ್ಲಿ, ನನಗೆ ನಮಸ್ಕಾರ ಮಾಡುವಿಕೆಯು ಅಹಂಕಾರವನ್ನು ಸೂಚಿಸುವುದಲ್ಲವೇ ?

ಭೀಷ್ಮ—ಶಿವ, ಶಿವಾ ! ಚೆನ್ನಾಯಿತು. ಆಚಾರ್ಯರೆ ! ತಾವೂ ಈ ರೀತಿ ಅಪ್ಪಣೆ ಕೊಡಿಸಬಹುದೇ ? ಅನೇಕ ಕಾರಣಗಳಿಂದ ನನಗಿಂತಲೂ ತಾವೇ ಉತ್ಕೃಷ್ಟರಾಗಿರುವಲ್ಲಿ, ನಿಕೃಷ್ಟನಾದ ನನಗೇ ಮೊದಲು ನಮಸ್ಕಾರವು ?

ನಾನು ಜನನಿಯ ಬಸುರಿನಿಂದ ಹುಟ್ಟಿದವನು. ತಾವು ಸ್ವಯಂಜಾತರು. ನನಗೆ ಆಯುಧವೇ ಜೀವನವು. ತಾವು ಶಸ್ತ್ರವಿದ್ಯೆ

ಯಲ್ಲಿ ಪಾರಂಗತರಾಗಿದ್ದರೂ, ಇದೊಂದು ನೆಪವೇ ಹೊರತು, ವಾಸ್ತವವಾಗಿ ತಮ್ಮ ವೃತ್ತಿಯು ಇದಲ್ಲ. ಸಕಲವರ್ಣಪೂಜ್ಯರೆನಿಸಿದ ಭೂಸುರರು ತಾವು. ಕ್ಷತ್ರಕುಲ ಸಂಭೂತನು ನಾನು. ತಾವು ಗುರುಗಳು. ಶಿಷ್ಯ ಸಮುದಾಯದಲ್ಲಿ ನಾನು ಉತ್ತಮನಲ್ಲದೆ, ನಾನೆಂದಿಗಾದರೂ ತಮಗಿಂತಲೂ ಉತ್ಕೃಷ್ಟನಾಗುವೆನೇ ?

ದ್ರೋಣ—ಮಹಾಮಹಿಮರು ತಮ್ಮನ್ನು ತಾವೇ ಎಂದಿಗಾದರೂ ಹೊಗಳಿಕೊಳ್ಳುವರೇ! ಇರಲಿ. ವತ್ಸಾ! ದುರ್ಯೋಧನಾ! ಬಾ. ಮೊದಲು ನನ್ನನ್ನೇ ನಮಸ್ಕರಿಸು.

ದುರ್ಯೋ—ಆಚಾರ್ಯವರ್ಯರೆ! ನಮಸ್ಕರಿಸುವೆನು.

ದ್ರೋಣ—(ಬಿಗಿದು ಅಪ್ಪಿ) ವತ್ಸಾ! ಅವಭೃಥಸ್ನಾನದ ಸಮಯದಲ್ಲಿಯೂ ಇದೇ ವಿಧವಾದ ಕ್ಲೇಶವನ್ನೇ ಅನುಭವಿಸು.

ದುರ್ಯೋ—ಅನುಗೃಹೀತನಾದೆನು. ಪಿತಾಮಹನೇ! ವಂದಿಸುವೆನು.

ಭೀಷ್ಮ—ಪೌತ್ರ! ಬಾ; ಬಾ; (ಎಂದು ತಲೆಯ ಮೇಲೆ ಕೈಯಿರಿಸಿ) ಇಂತೆಯೇ ದಿನದಿನಕ್ಕೂ ನಿನ್ನ ಬುದ್ಧಿಯು ಶಾಂತಿಯನ್ನು ಪಡೆಯುತ್ತಾ ಬರಲಿ.

ದುರ್ಯೋ—ಪರಮಾನುಗ್ರಹವು.
ಮಾತುಲನೇ! ವಂದಿಸುವೆನು.

ಶಕುನಿ—ವತ್ಸಾ! ಇಂತೆಯೇ ವಿಶೇಷವಾದ ದ್ರವ್ಯವನ್ನು ವಿನಿಯೋಗಪಡಿಸಿ, ಸಕಲ ಯಜ್ಞಗಳನ್ನೂ ನೆರವೇರಿಸಿ, ಜರಾಸಂಧನಂತೆ ರಾಜಸೂಯ ಯಾಗಸಮಯದಲ್ಲಿ ಭೂಮಂಡಲದ ಅರಸರನ್ನೆಲ್ಲಾ ಗೆದ್ದು ಕರೆತರುವನಾಗು.

ದ್ರೋಣ—ಭಲಾ! ಆಶೀರ್ವಚನ ಸಮಯದಲ್ಲಿಯೂ ಶಕುನಿಯು ತನ್ನ ಸೋದರಳಿಯನಿಗೆ ಉದ್ಯೋಗವನ್ನು ಸೂಚಿಸುತ್ತಿರುವನು! ಎಂತಹ ಬುದ್ಧಿಚಾತುರ್ಯ! ಈ ಕ್ಷತ್ರಿಯ ಕುಮಾರನು ಪ್ರಿಯವಿರೋಧಿಯೆಂದೆಣಿಸುವೆನು.

ದುರ್ಯೋ—ಮಿತ್ರಾ; ಕರ್ಣಾ! ಹಿರಿಯರನ್ನು ನಮಸ್ಕರಿಸುವ ಕಾಲದಲ್ಲಿ ಕ್ರಮಲಬ್ಧವಾದ ಮಿತ್ರನ ಪ್ರೀತಿಯನ್ನು ಅನುಭವಿಸಬಹುದಲ್ಲವೇ?

ಕರ್ಣ—ಗಾಂಧಾರೀ ಪುತ್ರನೇ!

ಯಜ್ಞಸಂಬಂಧವಾದ ನಿಯಮಗಳಿಂದ ನಿನ್ನ ದೇಹವು ಕೃಶವಾಗಿರುವುದು. ಅದರಿಂದ ನಿನ್ನ ದೇಹವನ್ನು ಒತ್ತುವೆನು ಬಾ. ಆದರೆ ನನ್ನ ಬಲವನ್ನು ಈಗ ತಡೆಯಬಲ್ಲೆಯಾ? ನಿನ್ನ ಅನುಜ್ಞೆಯನ್ನು ಕೇಳಿಕೊಳ್ಳದೆ ನಿನ್ನನ್ನು ಪೀಡಿಸಲು ನನಗೆ ಸಮ್ಮತಿ ಇಲ್ಲವು. ರಾಜರ್ಷಿಗಳಿಗೆ ಉಚಿತವಾದ ರೀತಿಯಿಂದ ಧೈರ್ಯಯುಕ್ತವಾದ ಮಾತನ್ನು ಹೇಳಿದೆಯಾಗಿ, ನನಗೆ ಅಂಜಿಕೆಯಾಗುವುದು.

ದುರ್ಯೋ—ನಿನ್ನ ಬುದ್ಧಿಯು ಯಾವಾಗಲೂ ಇಂತೆಯೇ ಇರಲಿ.

ದ್ರೋಣ—ಪುತ್ರಾ; ಸುಯೋಧನಾ! ದೇವೇಂದ್ರನ ಪ್ರಿಯಮಿತ್ರನಾದ ಭೀಷ್ಮಕರಾಜನು ನಿನ್ನನ್ನು ಗೌರವದಿಂದ ಇದಿರುನೋಡುತ್ತಿರುವನು.

ದುರ್ಯೋ—ಆರ್ಯನೇ! ಸುಖಾಗಮನವೇ? ನಮಸ್ಕರಿಸುವೆನು.

ಭೀಷ್ಮ—ಪೌತ್ರಾ; ದುರ್ಯೋಧನಾ! ದಕ್ಷಿಣ ದಿಕ್ಕಿನಲ್ಲಿ ನಮ್ಮ ಸೀಮೆಗೆ ದೊಡ್ಡ ಅಗಳ್ತೆಯಂತಿರುವ ಭೂರಿಶ್ರವನೆಂಬ ಅರಸು ನಿನ್ನ ಅನುಗ್ರಹವನ್ನು ಬಯಸಿ ನಿಂತಿರುವನು.

ದುರ್ಯೋ—ಆರ್ಯನೆ! ಸ್ವಾಗತವೆ?

ದ್ರೋಣ—ಪುತ್ರನೇ; ಸುಯೋಧನನೆ! ನಿನ್ನ ಯಜ್ಞವನ್ನು ಅನುಮೋದಿಸಿದ ವಾಸುದೇವ, ಬಲರಾಮರಿಬ್ಬರೂ ವತ್ಸನಾದ ಅಭಿಮನ್ಯುವನ್ನು ಪ್ರತಿನಿಧಿಯಾಗಿ ಕಳುಹಿಸಿರುವರು. ಇತ್ತ ಸೌಭದ್ರನು ನಿನ್ನನ್ನು ಗೌರವದಿಂದ ಇದಿರು ನೋಡುತ್ತಿರುವನು.

ಶಕುನಿ—ವತ್ಸಾ; ದುರ್ಯೋಧನಾ! ಜರಾಸಂಧನ ತನಯನಾದ ಸಹದೇವನು ನಮಸ್ಕರಿಸುತ್ತಿರುವನು. ಇತ್ತ ನೋಡು.

ದುರ್ಯೋ—ಮಗೂ! ಬಾ! ಬಾ! ತಂದೆಯಂತೆ ಪರಾಕ್ರಮಶಾಲಿಯಾಗಿ ಬಾಳು.

ಎಲ್ಲರೂ—ಗಾಂಧಾರೀ ಪುತ್ರನೇ! ಭೂಮಂಡಲದ ರಾಜಮಂಡಲಿಯು ನಿನ್ನನ್ನು ಮರ್ಯಾದೆಯಿಂದ ಇದಿರುನೋಡುತ್ತಿರುವುದು.

ದುರ್ಯೋ—ಅನುಗೃಹೀತನಾದೆನು. ಇದೆಲ್ಲಾ ಹಾಗಿರಲಿ. ಇಷ್ಟು ಮಂದಿ ಅರಸರೆಲ್ಲರೂ ಬಂದಿರುವಾಗ್ಗೆ, ವಿರಾಟನೊಬ್ಬನು ಮಾತ್ರ ಬಾರದಿರಲು ಕಾರಣವೇನು?

ಶಕುನಿ—ಅವನಲ್ಲಿಗೂ ದೂತನನ್ನು ಕಳುಹಿಸಿರುವೆನು. ಬಹುಶಃ ನಡು ದಾರಿಯಲ್ಲಿ ಬರುತ್ತಿರುವನೆಂದು ಊಹಿಸುವೆನು.

ದುರ್ಯೋ—ಆಚಾರ್ಯರೇ! ಮೂರ್ತಿವೆತ್ತ ಬ್ರಾಹ್ಮ, ಕ್ಷಾತ್ರ ತೇಜೋ ನಿಧಿಗಳೇ! ದಕ್ಷಿಣೆಯನ್ನು ಸ್ವೀಕರಿಸಿ, ಅನುಗ್ರಹಿಸಬೇಕುವೆನು.

ದ್ರೋಣ—ಏನು? ದಕ್ಷಿಣೆಯೇ! ಇರಲಿ, ಇರಲಿ; ಆಮೇಲಾಗಲಿ. ನಿನ್ನ ಆಯಾಸವನ್ನೆಲ್ಲಾ ಪರಿಹರಿಸಿಕೊಳ್ಳೆಂದು ಹೇಳುವೆನಲ್ಲವೆ! ಕಾಲಾಂತರದಲ್ಲಿ ತೆಗೆದುಕೊಳ್ಳುವೆನು. ನಾನೇ ಕೇಳಿ ತೆಗೆದುಕೊಳ್ಳುವೆನು.

ದುರ್ಯೋ—ಏನಿದು? ಆಚಾರ್ಯರು ನನಗೆ ಉಪಚಾರ ಹೇಳತೊಡಗಿದರು.

ಭೀಷ್ಮ—ಅಯ್ಯಾ! ಪ್ರಯೋಜನವೇನು? ಏತಕ್ಕೆಂದರೆ:—

ಸೋಮಪಾನವನ್ನೇನೋ ಮಾಡಿದೆ. ಬಾಲ್ಯದಲ್ಲಿಯೇ ನಿಮ್ಮ ತಂದೆಯು ನಿನ್ನನ್ನು ಈತನ ವಶ ಮಾಡಿದನು. ಅದಕ್ಕೆ ಅನುಸಾರವಾಗಿ ನೀನೂ ಈಗ ಏಕಚ್ಛತ್ರಾಧಿಪತಿಯೆನಿಸಿರುವೆ. ಲೋಕವನ್ನೆಲ್ಲಾ ನಿನ್ನ ಖ್ಯಾತಿಯು ಹರಡಿರುವುದು. ಈತನೇನೂ ಅನರ್ಹನಲ್ಲ. ಉತ್ತಮೋತ್ತಮನಾದ ಜ್ಞಾನಸಂಪನ್ನನು, ಭೂಸುರೋತ್ತಮನು, ಧನುರ್ವಿದ್ಯೆಯಲ್ಲಿಯಂತೂ ಈತನನ್ನು ಮಿಂಚಿದವರೇ ಇಲ್ಲ. ಇಂತು ಕ್ಷತ್ರಿಯ ಕುಲಗುರುವಾದ ಈತನು ದರಿದ್ರನಾಗಿರುವನೆಂದಮೇಲೆ ಅದೂ ಒಂದು ದ್ರವ್ಯವೇ? ಎಷ್ಟಿದ್ದರೇನು ಫಲ! ಅದರ ಅತಿಶಯವೇನು?

ದುರ್ಯೋ—ಪೂಜ್ಯರೇ! ಅಪ್ಪಣೆಯಾಗಲಿ. ತಮ್ಮ ಕೋರಿಕೆ ಏನಿರುವುದು? ನಾನೇನನ್ನು ಸಮರ್ಪಿಸಲಿ? ಯಾವುದಕ್ಕೂ ಕೊರತೆ ಇಲ್ಲ.

ದ್ರೋಣ—ಪುತ್ರಾ; ದುರ್ಯೋಧನಾ! ಆಗಲಿ. ಮತ್ತೊಮ್ಮೆ ಹೇಳುವೆನೆಂದೆನಲ್ಲವೆ?

ದುರ್ಯೋ—ಈಗ ತಾವು ಹಿಂದುಮುಂದು ನೋಡುತ್ತ ವಿಚಾರಿಸುವುದೇಕೆ? ತಮ್ಮ ಸನ್ನಿಧಿಯಲ್ಲಿ ಉಪದೇಶವನ್ನು ಕೈಕೊಂಡವನಾಗಿ, ತಮಗೆ ನಾನು ಪ್ರಾಣಾಧಿಕ ಪ್ರೇಮಪಾತ್ರನಾಗಿರುವೆನು. ತಮ್ಮ ಅನುಗ್ರಹದಿಂದ ಶೂರರಲ್ಲಿ ಗಣನೆಯನ್ನು ಪಡೆದಿರುವೆನು. ಸಾಹಸಿಯೆಂದು ಲೋಕವೆಲ್ಲವೂ ನನ್ನ ಖ್ಯಾತಿಯನ್ನು ಕೊಂಡಾಡುವುದು.

ಧಾರಾಳವಾಗಿ ಹೇಳಬಹುದಲ್ಲವೆ? ತಮ್ಮ ಇಷ್ಟಾರ್ಥವಾವುದು? ಏನನ್ನು ತಂದು ಸಮರ್ಪಿಸಲಿ? ತಮ್ಮ ಸರ್ವಸ್ವವನ್ನೂ ಸಾಧಿಸುವುದರಲ್ಲಿ ನಿಪುಣತರವಾದ ಗದೆಯು ನನ್ನ ಕೈಯಲ್ಲಿರುವುದಲ್ಲವೆ? ತಮಗೇನು ಕೊರತೆ? ಬೇಗನೆ ಅಪ್ಪಣೆಯಾಗಲಿ.

ದ್ರೋಣ—ಪುತ್ರನೇ! ಹೇಳುವೆನು. ಅದಕ್ಕೂ ಕಾಲ ಬರುವುದು. ಆದರೆ ಮೇಲೆಮೇಲೆ ನನ್ನನ್ನು ನಿರ್ಬಂಧಗೊಳಿಸದಿರು. ನನ್ನ ಅಂತರಂಗದಲ್ಲಿ ಪರಿತಾಪವು ಉಕ್ಕಿ ಬಂದು, ಕಣ್ಣೀರಿನ ವೇಗವು ನನ್ನ ಕುತ್ತಿಗೆಯನ್ನು ಬಿಗಿದಿರುವುದು. (ಉತ್ತರೀಯದಿಂದ ಕಂಬನಿಯನ್ನೊರೆಸಿಕೊಳ್ಳುವನು.)

ಎಲ್ಲರೂ—ಇದೇನು? ಆಚಾರ್ಯರು ಕಣ್ಣೀರು ಬಿಡುತ್ತಿರುವರು!

ಭೀಷ್ಮ—ಪೌತ್ರನೇ; ದುರ್ಯೋಧನನೇ! ಸುಮ್ಮನೆ ನಿರ್ಬಂಧಗೊಳಿಸದಿರು. ನಿನ್ನ ಪರಿಶ್ರಮವು ನಿಷ್ಫಲವಾದುದು.

ದುರ್ಯೋ—ಯಾರಲ್ಲಿ?

ಭಟ—ಜೀಯಾ! ಅಪ್ಪಣೆಯಾಗಲಿ.

ದುರ್ಯೋ—ಶುದ್ಧೋದಕವು ಬೇಕಾಗಿರುವುದು.

ಭಟ—ಮಹಾರಾಜನೇ! ಅಪ್ಪಣೆ. (ಹೊರಗೆ ಬಂದು ನೀರಿನ ತಂಬಿಗೆ ಯೊಡನೆ ಒಳಹೊಕ್ಕು) ಜೀಯಾ! ಅವಧರಿಸಬೇಕು. ಇಗೋ ಶುದ್ಧೋದಕವು.

ದುರ್ಯೋ—ಇತ್ತ ಕೊಡು. (ಕಲಶವನ್ನು ಕೈಯಲ್ಲಿಟ್ಟುಕೊಂಡು) ಆಚಾರ್ಯವರ್ಯರೆ! ಕಂಬನಿಯಿಂದ ಅಪರಿಶುದ್ಧವಾದ ಮುಖವನ್ನು ಶುದ್ಧಿ ಮಾಡಬಹುದಲ್ಲವೇ?

ದ್ರೋಣ—ಇರಲಿ, ಇರಲಿ. ನನ್ನ ಕಾರ್ಯಕ್ರಿಯೆಯೇ ಮುಖೋದಕವಾಗಿರಲಿ.

ದುರ್ಯೋ—ಛೀ, ಛೀ, ಆಚಾರ್ಯರೇಕೆ ಇಂತು ಚಿಂತಿಸುತ್ತಿರುವರು?
ಆಚಾರ್ಯವರ್ಯಾ! ಗುರುವರೇಣ್ಯಾ! ಪೂಜ್ಯಪಾದ!!
ನಾನು ಮೊದಲಿನಂತೆಯೇ ವಕ್ರಮಾರ್ಗವನ್ನು ಹಿಡಿದಿರುವೆನೆಂದು ಎಷ್ಟುಮಾತ್ರವೂ ನೆನೆಯಬಾರದು. ನಾನು ತುಸವಾದರೂ ಕೊಡ

ತಕ್ಕವನಲ್ಲವೆಂಬುದಾಗಿ ಸಮರ್ಥಿಸಬಾರದೆಂದು ಬೇಡುವೆನು. ನಾನು ಎಂದಿನಂತೆ ಈಗಲೂ ಲೋಭಪಿಶಾಚದ ಕೈಗೆ ಸಿಕ್ಕಿರುವ, ಅದೇ ದುರ್ಯೋಧನನೆಂತಲೇ ಭಾವಿಸಲಾಗದು. ಹಾಗೊಂದು ವೇಳೆ ತಮಗೆ ಅಂತಹ ಸಂದೇಹವೂ ಇದ್ದುದಾದರೆ, ನೂರಾರು ಬಾಣಗಳನ್ನು ಬಿಲ್ಲಿನಲ್ಲಿ ತೊಡೆತೊಡಿಸಿ, ಬರಟಾಗಿರುವ ತಮ್ಮ ಅಂಗೈಯನ್ನು ಚಾಚಬೇಕೆಂದು ಬೇಡುವೆನು. ಪ್ರತಿಗ್ರಹದಲ್ಲಿ ಸಾಧನಭೂತವಾದ ಉದಕಧಾರೆಯು ತಮ್ಮ ಹಸ್ತಪ್ರಸಾರಣವನ್ನು ಇದಿರು ನೋಡುತ್ತಿರುವುದು.

ದ್ರೋಣ—(ಸಂತಸದಿಂದ) ಭಲಾ ! ಇಷ್ಟು ಹೊತ್ತಿಗೆ ನನಗೆ ನಂಬುಗೆ ಹುಟ್ಟಿತು. ನನ್ನ ಭಾಗ್ಯವೇ ಭಾಗ್ಯ ! ನಾನೇ ಪುಣ್ಯಶಾಲಿಯು.

ಮಗೂ; ದುರ್ಯೋಧನಾ ! ಕಿವಿಗೊಟ್ಟು ಕೇಳು.

ನಿಲ್ಲುವುದಕ್ಕೆ ನೆಲೆಯಿಲ್ಲದೆ, ನಿರಾಶ್ರಯರಾಗಿ, ಬೆಟ್ಟ, ಕಾಡುಗಳಲ್ಲಿ ಅಲೆದಾಡುತ್ತಾ ಸಂಕಟಪಡುತ್ತಿರುವ ಪಾಂಡವರಿಗೆ ಹನ್ನೆರಡು ವರ್ಷಗಳಿಂದಲೂ ಯಾವುದೊಂದು ಗತಿಯೂ ಕಾಣಲಿಲ್ಲವಲ್ಲಾ ! ವತ್ಸಾ ! ಈಗಲಾದರೂ ಪಾಂಡವರ ಭಾಗವನ್ನು ಅವರಿಗೆ ಕೊಡಬಾರದೇ ? ಇದೇ ನನ್ನ ಭಿಕ್ಷೆಯು. ಇದಕ್ಕಿಂತಲೂ ಬೇರೆಯಾದ ಗುರುದಕ್ಷಿಣೆಯೂ ಇರುವುದೇ ? ನಿನ್ನ ದ್ರವ್ಯವನ್ನು ಕಟ್ಟಿಕೊಂಡು ನಾನೇನು ಮಾಡಬಲ್ಲೆನು ?

ಶಕುನಿ—(ಗಾಬರಿಯಿಂದ) ಬೇಡ! ಬೇಡ! ಇದು ಯೋಗ್ಯವಲ್ಲ. ಆಚಾರ್ಯರೆ! ಗುರುವೆಂದು ನಿಮ್ಮ ಮಾತಿನಲ್ಲಿ ಗೌರವವನ್ನಿರಿಸಿದಕಾರಣ, ವಿಶ್ವಾಸದಿಂದ ಬೇಳುವೆಯ ಮಾತುಗಳನ್ನು ಹೇಳಿ, ಯಜ್ಞವೆಂಬ ಯಾವುದೋ ಒಂದು ನೆಪವನ್ನು ನೀವಾಗಿಯೇ ತಂದೊಡ್ಡಿ, ಈ ರೀತಿಯಾದ ಧರ್ಮವಂಚನೆಯು ನಿಮಗೆ ಯುಕ್ತವಾದುದೇ ? ಗೌರವದಿಂದ ನಿಮ್ಮ ಮಾತನ್ನು ನಡೆಯಿಸುವೆನೆಂದು ಬಾಯಿಯಿಂದ ಮಾತನ್ನು ಆಡಿದ ಮಾತ್ರಕ್ಕೇ ನೀವು ಈ ರೀತಿ ಮೋಸಮಾಡಬಹುದೇ ? ಇದು ನಿಮಗೆ ಯೋಗ್ಯವಲ್ಲ.

ದ್ರೋಣ—ಏನು ? ಧರ್ಮವಂಚನೆಯೇ ? ಎಲೋ ! ಬೇಡ. ಹಾಗೆಂದಿಗೂ ತಿಳಿಯಬೇಡ. ಕೂಪಕೂರ್ಮದಂತೆ ಗಾಂಧಾರದೇಶವನ್ನು ಮಾತ್ರ ನೋಡಿ, ಯಾವುದೋ ಒಂದು ಮೂಲೆಯಲ್ಲಿ ಇದ್ದ ಮಾತ್ರದಿಂದಲೇ ನಿನಗೂ ಇಷ್ಟೊಂದು ದುರಹಂಕಾರವೇ? ನೀನಾವ ದೇಶವನ್ನು ಬಲ್ಲೆ ? ಧರ್ಮದ ಗಂಧವನ್ನಾದರೂ ಬಲ್ಲೆಯಾ ? ಶಕುನಿಯೆ ! ನೀನೊಬ್ಬನು ನೀಚನಾದ ಮಾತ್ರಕ್ಕೆ "ತಾ ಕಳ್ಳ ಪರರ ನಂಬ" ಎಂಬಂತೆ ಎಲ್ಲರೂ ನಿನ್ನಂತೆಯೇ ಇರುವರೆಂದು ತಿಳಿದೆಯಾ ? ಅಯ್ಯಾ ! ಅದೂ ಹಾಗಿಗಲಿ.

ಸಹೋದರರಿಗೆ ಪೈತೃಕವಾದ ರಾಜ್ಯವನ್ನು ಹಿಂದಿರುಗಿ ಕೊಡುವುದಾಗಿ ಹೇಳುವುದೂ ಧರ್ಮವಂಚನೆಯಲ್ಲವೇ ! ಅದರಲ್ಲಿಯೂ ಬಲಾತ್ಕಾರವಾಗಿ ಅವರಿಂದ ಕಸುಗೊಂಡಿದ್ದ ರಾಜ್ಯವಲ್ಲವೇ ಕೊಡಬೇಕಾಗಿರುವುದು? ಅವರೂ ದೀನಭಾವದಿಂದ ಹಿಂದಿರುಗಿ ಕೊಡಬೇಕೆಂದು ಯಾಚಿಸುತ್ತಿರುವಲ್ಲಿ, ನ್ಯಾಯವಾಗಿ ಅವರಿಗೆ ಸಲ್ಲಬೇಕಾದುದನ್ನು ಹಿಂದಕ್ಕೆ ಕೊಡುವುದಾಗಿ ಹೇಳುವುದು ವಿಶ್ವಾಸಘಾತುಕತನವಲ್ಲವೇ ? ನಾನೇನು ಬಲ್ಲೆನು ? ನೀನೀಗ ಸಕಲ ಧರ್ಮರಹಸ್ಯಗಳನ್ನೂ ಚೆನ್ನಾಗಿ ಬಲ್ಲ ಪ್ರವೀಣನು.

ಶಕುನಿ,<br>ಕರ್ಣ,<br>ದುರ್ಯೋಧನರು } ಏನು? ಹೇಗೆ? ಬಲಾತ್ಕಾರದಿಂದ ಕಸುಗೊಂಡೆವೇ ನಾವು?

ಭೀಷ್ಮ—ಪೌತ್ರನೆ ; ದುರ್ಯೋಧನನೆ ! ಇದು ಅವಭೃಥಸ್ನಾನವಷ್ಟೆ ? ಜೂಜಾಟವಲ್ಲವಲ್ಲ ! ಕಳೆದುದು ಕಳೆದುಹೋಯಿತು. ಈಗ ಅದರ ಪ್ರಸ್ತಾವವೇತಕ್ಕೆ ? ಅವಭೃಥವು ನೆರವೇರಿ, ಯಜ್ಞದೀಕ್ಷೆಯು ಸಮಾಪ್ತಿಯಾಗುವವರೆಗಾದರೂ ಗೋಮುಖವ್ಯಾಘ್ರದಂತೆ, ಮೇಲೆಮೇಲೆ ಸವಿಮಾತುಗಳನ್ನಾಡುತ್ತಾ, ಅಂತರಂಗದಲ್ಲಿ ದ್ವೇಷದಿಂದ ತುಂಬಿರುವ ಈ ಶಕುನಿಯ ಮಾತನ್ನು ಕೇಳದಿದ್ದರೆ, ನಿನ್ನ ಯಜ್ಞದೀಕ್ಷೆಯು ಸಫಲವಾಗುವುದು. ಪೌತ್ರನೆ ! ನೋಡು.

ಪಾಂಡುತನಯರು ದ್ರುಪದತನಯೆಯೊಡಗೂಡಿ ಕಾಡುಪಾಲಾಗಿ ಅಡವಿಯಲ್ಲಿ ಅನ್ಯಾಯವಾಗಿ ಹೋಗುತ್ತಿರುವ

ಧೂಳಿಯನ್ನೆಲ್ಲಾ ನೆತ್ತಿಯ ಮೇಲೆ ಸುರಿದುಕೊಂಡು ನಿಲ್ಲುವುದಕ್ಕೆ ನೆಲೆಯಿಲ್ಲದೆ ಬೆಟ್ಟ ಗುಡ್ಡ ಗವಿಗಳಲ್ಲಿಯೂ, ಮರಗಳ ಕೆಳಗೂ ಅಲೆದಾಡುತ್ತಿರುವರು. ಅವರ ದುರದೃಷ್ಟಕ್ಕೆ ತಕ್ಕಂತೆಯೇ ನಿನಗೂ ಅವರ ವಿಷಯದಲ್ಲಿ ಕನಿಕರವಿಲ್ಲ. ಹೀಗಿರುವಲ್ಲಿ ಅವರು ಮಾತ್ರ ನಿನ್ನ ವಿಷಯದಲ್ಲಿ ಅನುಕೂಲರಾಗಿರುವುದಾದರೂ ಹೇಗೆ? ಇದಕ್ಕೆಲ್ಲಾ ಈ ಶಕುನಿಯ ಗರ್ವವೇ ಕಾರಣವು. ಅವನ ಕೊಬ್ಬು ಇನ್ನೆಷ್ಟು ಇರುವುದೋ! ಅದೆಂತಹ ಕಲ್ಲು ಎದೆಯೋ ನಾನರಿಯೆನು.

ದುರ್ಯೋ—ಪಿತಾಮಹನೇ! ಆಗಲಿ. ಆಚಾರ್ಯರನ್ನು ಹೀಗೆ ಕೇಳಿ ನೋಡುವೆನು

ದ್ರೋಣ—ಪುತ್ರಾ! ಸಂದೇಹವೇಕೆ? ಅದೇನು? ಹೇಳು. ಕೇಳುವ!

ದುರ್ಯೋ—ನಾವಂತೂ ಬಲಾತ್ಕಾರದಿಂದಲ್ಲವೇ ಅವರ ರಾಜ್ಯವನ್ನು ಕಸುಗೊಂಡೆವು? ಆಗಲಿ. ನೂರಾರು ಮಂದಿಯ ಸಭೆಯಲ್ಲಿ ಅವರ ಮಾನವನ್ನು ಈಡಾಡಿ ರಾಜ್ಯವನ್ನು ಅಪಹರಿಸಿದೆವಲ್ಲಾ! ಆಗ ಸಮರ್ಥರಾದ ಆ ಪಾಂಡವರು ರೋಷವನ್ನಾದರೂ ಅಡಗಿಸಿ ಕೊಂಡಿದ್ದರೇಕೆ? ಕೈಮಾಡಿ ಮುಂಬರಿದು ತಮ್ಮ ರಾಜ್ಯವನ್ನು ತಾವು ಸಾಧಿಸಿಕೊಳ್ಳಬೇಕಾಗಿದ್ದಿತಲ್ಲವೇ?

ದ್ರೋಣ—ಈ ವಿಷಯದಲ್ಲಿ ಜೂಜಾಡುವುದು ಕ್ಷತ್ರಿಯರಿಗೆ ಧರ್ಮವೆಂದರಿತು, ದ್ಯೂತದಲ್ಲಿ ಆಸಕ್ತಿಯನ್ನಿರಿಸಿ, ಮೋಸಹೋದ ನಿರ್ಭಾಗ್ಯಚಕ್ರವರ್ತಿಯೆನಿಸಿದ ಆ ಯುಧಿಷ್ಠಿರನನ್ನೇ ಕೇಳಬೇಕು. ಈ ಪ್ರಶ್ನೆಗೆ ಸಮಾಧಾನ ಹೇಳಲು ನನಗೆ ಶಕ್ತಿಯಿಲ್ಲ. ಆ ಕಾಲದಲ್ಲಿ ಒಡ್ಡೋಲಗದ ನಡು ಕಂಭವನ್ನು ಓರೆಗಣ್ಣಿನಿಂದ ನೋಡುತ್ತಿದ್ದ ಭೀಮಸೇನನನ್ನು ತಡೆಮಾಡಿದ ಆ ಯುಧಿಷ್ಠಿರನಿಗೆ ಅರಿವು ಸಾಲದು. ಆಗ ಅವನೊಬ್ಬನನ್ನು ಅಡ್ಡಿಮಾಡದೆ ಬಿಟ್ಟಿದ್ದರೆ ಈಗ ಈ ಶಕುನಿಯೂ ನನ್ನನ್ನು ಈ ರೀತಿ ಆಕ್ಷೇಪಿಸುತ್ತಿದ್ದನೇ?

ಭೀಷ್ಮ—ಯಾವುದೋ ಪ್ರಾರಂಭವಾಯಿತು. ಎಲ್ಲಿಯೋ ಬಂದು ಸೇರಿರುವಿರಿ! ನಿಮ್ಮ ಉದ್ದೇಶವೇನು? ಈಗ ನೀವಾಡು

ತ್ತಿರುವ ಮಾತಾದರೂ ಯಾವುದು? ಆಚಾರ್ಯರೇ! ಈಗ ಕಾರ್ಯವು ಹೆಚ್ಚೋ? ಕಲಹವು ಬೇಕೋ? ಜಗಳವಾಡುವುದಕ್ಕೆ ಅಲ್ಲವಷ್ಟೇ ನೀವೀಗ ಇಲ್ಲಿ ಸೇರಿರುವುದು? ಪ್ರಸ್ತುತವನ್ನು ಕುರಿತು ಯೋಚಿಸಿರಿ. ಮುಂದೆ ನಡೆಯಬೇಕಾದುದನ್ನು ನೋಡಿರಿ.

ದ್ರೋಣ—ಅಂತಹ ಕಳ್ಳತನವೇನು? ಏಕೆ ಅಷ್ಟೊಂದು ಕದರ್ಥನವು? ಆಗಲಿ. ಕಲಹವೇ ಆಗಲಿ. ಅದಕ್ಕಾರು ಹಿಂಜರಿಯುವರು?

ಭೀಷ್ಮ—(ದ್ರೋಣನ ಕೈಹಿಡಿದು) ಆಚಾರ್ಯರೇ! ಸಿಟ್ಟುಗೊಳ್ಳದಿರಿ. ಪ್ರಸನ್ನರಾಗಿರಿ.

(ದುರ್ಯೋಧನನೊಡನೆ) ಪೌತ್ರನೇ! ಕೇಳು.

ಬಲಹೀನರೂ, ಹೇಡಿಗಳೂ, ನಿರಾಶ್ರಯರೂ ಎನಿಸಿದ ಆ ಪಾಂಡು ತನಯರು ಈಗ ನಿನ್ನನ್ನು ಸಾಮೋಪಾಯದಿಂದ ಕೇಳಿಕೊಳ್ಳುವ ರಲ್ಲದೆ, ಹೆಮ್ಮೆಯನ್ನು ತೋರಿ, ನಿನ್ನ ಮೇಲೆ ಕೈಮಾಡತೊಡಗಲಿ ಲ್ಲವಲ್ಲಾ! ಹೇಗಾದರೂ ನೀನು ದೊಡ್ಡವನಲ್ಲವೇ? ನೀನು ಮುನಿ ಸುಗೊಂಡಿದ್ದರೂ ಅವರುಮಾತ್ರ ನಿನ್ನಲ್ಲಿಯೂ, ನಿನ್ನ ಕುಟುಂ ಬದಲ್ಲಿಯೂ ವಿಶ್ವಾಸವುಳ್ಳವರೆನ್ನಲು ಸಂದೇಹವೇ ಇಲ್ಲ. ಅವರೂ ನಿನ್ನವರೆಂದು ಭಾವಿಸಿ, ಈಗಲಾದರೂ ತಕ್ಕ ರೀತಿಯಿಂದ ಅವ ರನ್ನು ಬರಮಾಡಿಕೊಳ್ಳುವೆಯಾ? ಇಲ್ಲವೇ ನಿನಗೆ ಅವರ ಮೇಲೆ ದಯೆಯಿಲ್ಲವೆಂದು ಗುಂಡಿಗೆಯನ್ನು ಕಲ್ಲಾಗಿಸಿ, ಅಡವಿಯಲ್ಲಿಯೇ ಕಾತು ಮೃಗಗಳೊಂದಿಗೆ ಜೀವಿಸಿಕೊಂಡಿರಬೇಕೇ?

ಶಕುನಿ—ಅವರು ಅಲ್ಲಿಯೇ ಇರಲಿ! ಅಲ್ಲಿಯೇ ಇರಲಿ! ಇಲ್ಲಿ ಕೊಳ್ಳೆ ಹೋಗುತ್ತಿಲ್ಲ.

ಕರ್ಣ—ಅಚಾರ್ಯರೇ! ಸಿಟ್ಟುಗೊಳ್ಳದಿರಿ. ದುರ್ಯೋಧನನ ಸ್ವಭಾವ ವನ್ನು ನೀವು ಅರಿಯಿರಾ?

ಹಿತವನ್ನು ಹೇಳಿದರೂ ವಕ್ರಬುದ್ಧಿಯಿಂದ ದ್ವೇಷವೆಂದು ತಿಳಿಯು ವನು. ಮಾತನಾಡುವುದಕ್ಕೆ ಮೊದಲೇ ಕೋಪವು ಯಾವಾಗಲೂ ಮೂಗಿನ ತುದಿಯಲ್ಲಿಯೇ ಇರುವುದು. "ಯಾರು ಹಿತವರು,

ಯಾರು ಹಗೆಗಳು ಎಂದು ತಿಳಿಯುವ ವಿವೇಕವನ್ನು ದೇವರು ಅವನಿಗೆ ಕೊಡಲಿಲ್ಲ. ಯಾರಾದರೂ ಒಳ್ಳೆಯ ಮಾತಿನಿಂದ ಕಿವಿಗಿಂಪಾದ ರೀತಿಯಲ್ಲಿ ಸ್ತೋತ್ರಮಾಡತೊಡಗಿದರೂ ಹೆಣ್ಣು ಹುಲಿಯಂತೆ ಮೇಲೆ ಬೀಳುವನು. ಈಗ ದೈವಾನುಗ್ರಹದಿಂದ ಈ ಯಜ್ಞದೀಕ್ಷೆಯನ್ನು ಕೈಕೊಂಡಂದಿನಿಂದ ಈ ಬುದ್ಧಿಯು ಸ್ವಲ್ಪ ಹಿಂದುಳಿದಿರುವುದು. ಹೇಗಾದರೂ ಅವನು ನಿಮ್ಮ ಶಿಷ್ಯನಲ್ಲವೇ? ಶಿಷ್ಯನ ಕಾರ್ಯವನ್ನು ಸಾಧಿಸುವುದು ತಮಗೆ ಧರ್ಮವಾದುದು. ಮದ್ದಾನೆಯನ್ನು ಉಪಾಯವಾಗಿ ಮೃದುಮಧುರವಚನಗಳಿಂದ ವಶಪಡಿಸಿಕೊಂಡು, ಮೇಲೆ ಏರಬೇಕಲ್ಲದೆ, ನಾವೂ ಕಠಿಣವೃತ್ತಿಯನ್ನು ಅವಲಂಬಿಸಿದಲ್ಲಿ, ಅನೇಕ ದೋಷಗಳು ಸಂಭವಿಸುವುವು. ಈ ವಿಷಯದಲ್ಲಿ ಹೆಚ್ಚಿಗೆ ತಮಗೆ ಬಿನ್ನವಿಸುವ ಶಕ್ತಿಯು ನನಗೆ ಸಾಲದು.

ದ್ರೋಣ—ವತ್ಸಾ; ಕರ್ಣಾ! ಬ್ರಾಹ್ಮಣರು ತೇಜಸ್ವಿಗಳಾದುದರಿಂದ ಕೋಪವು ಸುಲಭವಾಗಿ ಮಂಡೆಯ ಮೇಲೆ ಏರಿತು. ಇದು ಬ್ರಾಹ್ಮಣ ಕುಲಕ್ಕೇ ಬಂದಿರುವುದು. ಸಮಯ ಬಂದಾಗ ಮಾತನ್ನು ಬಿಗಿಹಿಡಿಯಲಾರದೆ ಮಾತನ್ನು ಹೊರಗೆ ಬಿಟ್ಟಾಯಿತು. ಇರಲಿ. ಈಗ ನಿನ್ನ ಮಾತಿನಂತೆಯೇ ಬರುವೆನು.
(ದುರ್ಯೋಧನನನ್ನು ನೋಡಿ) ಪುತ್ರಾ! ದುರ್ಯೋಧನಾ! ಇಗೋ ಈಗ ನಾನು ಒಂದು ಮಾತನ್ನು ಹೇಳುವೆನು. ನಿನ್ನ ಮೇಲೆ ಅಧಿಕಾರವು ನನಗೆ ಇರುವುದಷ್ಟೆ? ನನ್ನ ಮಾತಿನಂತೆ ನಡೆಯುವೆಯಲ್ಲವೇ? ಹಾಗಾದರೆ ಹೇಳು.

ದುರ್ಯೋ—ಆಚಾರ್ಯರೇ! ಇದಕ್ಕೂ ಸಂದೇಹವೇ? ನಾನೊಬ್ಬನೇ ಅಲ್ಲ, ನನ್ನ ಕುಲಕ್ಕೇ ತಾವು ಶಾಸಕರಾಗಿರುವಿರಿ. ಅಡ್ಡಿಯೇನು?

ದ್ರೋಣ—ಇದೀಗ ಯುಕ್ತವಾದ ಮಾತು. ನಿನಗೆ ಯೋಗ್ಯವಾದುದು. ಮಗೂ! ನನ್ನ ಮಾತನ್ನು ನಡೆಸುವುದರಿಂದ ನೀನು ಮೋಸ ಹೋಗುವೆಯೆಂದಲ್ಲವೇ ಶಕುನಿಯು ಹೇಳಿದುದು? ಹಾಗೆಯೇ ಆಗಲಿ. ಇದರಿಂದ ನಿನಗೇನೂ ಕಡಮೆಯಾಗಲಾರದು. ನಿನ್ನನ್ನೇ

ನಾನು ಬಲಾತ್ಕರಿಸುವೆನು. ಇದರಿಂದ ಲಾಭವಾದರೂ ಆಗಲಿ. ನಷ್ಟಬಂದರೂ ಬರಲಿ. ದೊಡ್ಡ ಮನೆತನದವರಿಗೆ ಪರಸ್ಪರವಾಗಿ ಮನಸ್ತಾಪವು ಒದಗಿದಾಗ, ಅದನ್ನು ಶಾಂತಿಗೊಳಿಸುವುದು ಧರ್ಮಾಧಿಕಾರಿಗಳ ಕರ್ತವ್ಯವಲ್ಲವೇ? ನಾವೇ ಮಾತನಾಡುವುದಕ್ಕೆ ಹಿಂದುಳಿದರೆ ನಿಮಗೆ ಧೈರ್ಯವಾಗಿ ತಿಳಿಯಹೇಳತಕ್ಕವರಾರು? ಈ ವೈರವು ಶಾಂತವಾಗುವುದಾದರೂ ಎಂದಿಗೆ?

ದುರ್ಯೋ—ಶಿವ! ಶಿವಾ! ನಾನಾವಮಾತನ್ನೇ ಎತ್ತಲಿಲ್ಲವಲ್ಲಾ! ನಮ್ಮ ಸೋದರಮಾವನಲ್ಲವೇ?

ದ್ರೋಣ—(ಆತ್ಮಗತಂ) ಶಕುನಿಯೋ? (ಪ್ರಕಾಶಂ) ಹಾಗಾದರೆ ಕೆಲಸ ಗೆಟ್ಟಿತು.

ದುರ್ಯೋ—ಮಾವನೇ! ಇತ್ತಬಾ. ಮಿತ್ರ ಕರ್ಣಾ! ಈ ಕಡೆ ಬರಬಾರದೇ?

ದ್ರೋಣ—(ಆತ್ಮಗತಂ) ಇರಲಿ. ಹೀಗೆಯೂ ಮಾತನಾಡಿ ನೋಡುವೆನು. (ಪ್ರಕಾಶಂ) ವತ್ಸಾ; ಗಾಂಧಾರ ರಾಜಾ! ಸ್ವಲ್ಪ ಈ ಕಡೆ ಬರುವೆಯಾ?

ಶಕುನಿ—ಇಗೋ ಬಂದಿರುವೆನು.

ದ್ರೋಣ—ವತ್ಸಾ! ನೋಡು.

ಮುದುಕರಾದ ಮೇಲೆ ಕೋಪವು ಬಹಳ ಹೆಚ್ಚು. ಬುದ್ಧಿಚಪಲತೆಯಿಂದ ಏನೇನನ್ನೋ ಹೇಳಿದೆನು. ಅದನ್ನೆಲ್ಲಾ ಮನಸ್ಸಿನಲ್ಲಿಡಬೇಡ. ನಾನಾಡಿದ ಕಠಿಣಭಾಷಣೆಗೆ ಪರಿಷ್ವಂಗವು ಶಮನವಾಗಿರಲಿ (ಎಂದು ಶಕುನಿಯನ್ನು ಬಿಗಿದಪ್ಪುವನು. ಶಕುನಿ ತಪ್ಪಿಸಿಕೊಳ್ಳುವನು)

ಭೀಷ್ಮ—(ಆತ್ಮಗತಂ) ಶಿಷ್ಯರಾದ ಪಾಂಡವರ ಮೇಲಣ ಅಭಿಮಾನದಿಂದಲೂ, ಆ ಪಾಂಡವರಂತೆಯೇ ಶಿಷ್ಯವರ್ಗಕ್ಕೆ ಸೇರಿದ ದುರ್ಯೋಧನನು ಅನ್ಯಾಯವಾಗಿ ಕೆಟ್ಟುಹೋಗಬಾರದೆಂಬ ಮರುಕದಿಂದಲೂ ಕುರುಕುಲಾಚಾರ್ಯನೆನಿಸಿದ ಆಚಾರ್ಯನು ಹೀನನಾದ ಶಕುನಿಯನ್ನು ಬೇಡಿಕೊಳ್ಳುವನು. ಇಷ್ಟು ವಿಧದಿಂದ ಸಮಾಧಾನ ಹೇಳಿದರೂ

ಇವನುಬೇರೆ ತನ್ನ ವಕ್ರಮಾರ್ಗವನ್ನು ಮಾತ್ರ ಬಿಡಲೇ ಇಲ್ಲ.

ಶಕುನಿ—(ಆತ್ಮಗತಂ) ಅಬ್ಬಬ್ಬಾ! ಇವನೆಂತಹ ಮೋಸಗಾರನು! ಆಚಾರ್ಯನೆಂದರೆ ಸಾಮಾನ್ಯನಲ್ಲ! ಈ ಶಠನು ಕಾರ್ಯಲೋಭದಿಂದ ನನ್ನನ್ನು ಸಮಾಧಾನಗೊಳಿಸಬಂದಿರುವನು. ಇದಕ್ಕೆಲ್ಲಾ ನಾನೇ ಬಳಬೀಳುವನು?

(ಎಲ್ಲರೂ ಕೂಡುವರು)

ದುರ್ಯೋ—ಮಾತುಲನೇ! ಪಾಂಡವರ ಅರ್ಧರಾಜ್ಯದ ವಿಷಯವಾಗಿ ಏನು ನಿಶ್ಚಯ ಮಾಡಿರುವೆ?

ಶಕುನಿ—ನಿಶ್ಚಯವೇನು? ಮಾಡುವುದೇನು? ಕೊಡಕೂಡದೆಂಬುದೇ ತೀರ್ಮಾನವು..

ದುರ್ಯೋ—ಕೊಡುವುದು ಯುಕ್ತವೆಂದು ಹೇಳಬಾರದೇ? ಮಾವ!

ಶಕುನಿ—ರಾಜ್ಯವನ್ನು ಕೊಡುವುದು ಯುಕ್ತವೆಂದು ತಿಳಿದಿದ್ದಪಕ್ಷದಲ್ಲಿ ನನ್ನೊಡನೆ ಯೋಚಿಸುವುದೇಕೆ? ಅರ್ಧರಾಜ್ಯವಲ್ಲದಿದ್ದರೆ ಪೂರ್ತಿಯಾಗಿಯೇ ಕೊಡು.

ದುರ್ಯೋ—ಮಿತ್ರನೇ! ಅಂಗರಾಜನೇ! ನೀನೇಕೆ ಏನನ್ನೂ ಹೇಳದೆ ಸುಮ್ಮನಾದೆ?

ಕರ್ಣ—ನಾನೇನೂ ಹೇಳಬೇಕಾದುದಿಲ್ಲ.

ರಾಮಚಂದ್ರನೇ ಮುಂತಾದ ಎಷ್ಟೋ ಮಂದಿ ಚಕ್ರವರ್ತಿಗಳು ಭೂಮಿಯನ್ನು ಆಳಿದರು ಅವರೇನೂ ಹಿಂದೆಹಾಕಿಕೊಂಡುಹೋಗ ಲಿಲ್ಲ. ಅಣ್ಣತಮ್ಮಂದಿರು ಅನ್ಯೋನ್ಯವಾಗಿ ಪ್ರೀತಿಭಾವದಿಂದ ಇರ ಬಾರದೆಂದೂ ನಾನು ತಡೆಯುವುದಿಲ್ಲ. ಸಾಧ್ಯವೋ, ಅಸಾಧ್ಯವೋ ಅದನ್ನು ನೀನೇ ನಿರ್ಧರಿಸಬೇಕು. ಯುದ್ಧಪ್ರಸಕ್ತಿಬಂದಲ್ಲಿ ನಾನು ನಿನಗೆ ಸಹಾಯಕನಾಗಿರುವೆನು.

ದುರ್ಯೋ—ಮಾವಾ! ಬಲಶಾಲಿಗಳಾದ ಶತ್ರುಗಳೂ ಬಹಳವಾಗಿರಬೇಕು. ಬದುಕುವುದಕ್ಕೆ ಮಾರ್ಗವೇ ಇರಬಾರದು. ಅಂತಹ ಯಾವುದಾ ದರೊಂದು ದೇಶವನ್ನು ನಿಶ್ಚಯಿಸಿ ಹೇಳು. ಅಲ್ಲಿ ಪಾಂಡವರು ವಾಸವಾಗಿರಲಿ.

ಶಕುನಿ—ಅಯ್ಯೋ! ಇದೊಂದುವಿಧವಾದ ಮರುಳುತನ. ನಾನೇನೆಂದು ಹೇಳಲಿ? ಅಂತಹ ದೇಶವು ಭೂಮಿಯ ಮೇಲೆಯೇ ಇಲ್ಲ. ಅರ್ಜುನನಿರುವ ದೇಶದಲ್ಲಿ ಹಗೆಗಳೆಂದರೇನು? ಇವರ ಮೇಲೆ ಕೈಯೆತ್ತುವುದೆಂದರೇನು? ಅವನಿಗಿಂತಲೂ ಬಲಶಾಲಿಗಳಾರು? ಧರ್ಮರಾಜನು ಮರುಭೂಮಿಯಲ್ಲಿ ವಾಸಮಾಡಿಕೊಂಡಿದ್ದರೂ ಅಲ್ಲಿಯೂ ಪೈರುಪಚ್ಚೆಗಳು ಹೇರಳವಾಗಿ ಬೆಳೆಯುವುವು.

ಹೀಗಿರುವಲ್ಲಿ ಯಾವುದೋ ಶತ್ರುಮಧ್ಯದ ರಾಜ್ಯವಂತೆ! ಬದುಕುವುದಕ್ಕೆ ಮಾರ್ಗವಿರಬಾರದಂತೆ! ನಾನದನ್ನು ಹೇಳಬೇಕಂತೆ! ಅಲ್ಲಿ ಪಾಂಡವರು ಇರಬೇಕಂತೆ!

ದುರ್ಯೋ—ಹಾಗಾದರೆ ನಾನೀಗ ಗುರುವಿನ ಅಂಗೈಯಲ್ಲಿ ಧಾರೆಯೆರೆದಿರುವೆನಲ್ಲಾ? ಇದಕ್ಕೆ ನೂರಾರು ಮಂದಿ ಹಿರಿಯರೂ, ಭೂಮಂಡಲದ ಅರಸುಗಳೆಲ್ಲರೂ ಸಾಕ್ಷಿಯಾಗಿರುವರು. ಅದರಿಂದ ಈ ಧಾರೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೇ? ಇಲ್ಲ ಮೋಸಗಾರನೆನಿಸಿಕೊಳ್ಳಲೇ? ಇಲ್ಲವೇ ಗುರುವಿನ ವಿಷಯದಲ್ಲಿ ವಿಧೇಯನಲ್ಲವೆಂದು ಅಪಪ್ರಥೆಯನ್ನು ಪಡೆಯಲೇ? ಹೇಗಾದರೂ ಆಗಲಿ. ಎಲೌ ನೃಪನೇ! ಏನಾದರೂ ಮಾಡಿ, ನನ್ನ ಮಾತು ಸುಳ್ಳಾಗದಂತೆ ಮಾಡಿದರೆ ಸಾಕು.

ಶಕುನಿ—ಸುಳ್ಳುಭಾಷೆಯಿಂದ ನೀನು ಬಿಡುಗಡೆ ಹೊಂದಬೇಕಷ್ಟೆ?

ದುರ್ಯೋ—ಅಷ್ಟೇ! ಮತ್ತೇನು?

ಶಕುನಿ—ಹಾಗಾದರೆ ಇತ್ತ ಬಾ. (ಇಬ್ಬರೂ ದ್ರೋಣನ ಬಳಸಾರ್ದು) ಆಚಾರ್ಯರೇ! ಪೂಜ್ಯನಾದ ಕೌರವಾಧೀಶ್ವರನು ತಮ್ಮೊಡನೆ ವಿಜ್ಞಾಪಿಸಲು ಕುತೂಹಲಗೊಂಡಿರುವನು.

ದ್ರೋಣ—ವತ್ಸಾ; ಗಾಂಧಾರರಾಜ! ಅದೇನು? ನೀನೇ ಹೇಳಬಾರದೇ?

ಶಕುನಿ—ಐದು ರಾತ್ರಿಗಳೊಳಗಾಗಿ ಪಾಂಡವರ ಸಮಾಚಾರವನ್ನು ತಿಳಿದುತಂದಲ್ಲಿ, ಅರ್ಧರಾಜ್ಯವನ್ನು ಕೊಡುವುದಕ್ಕೆ ಅಭ್ಯಂತರವಿಲ್ಲ. ತಾವು ಪಾಂಡವರನ್ನು ಕರೆತರಬಹುದು. ಆದರೆ ಮಾತ್ರ ಪಂಚರಾತ್ರವು ಅತಿಕ್ರಮಿಸಕೂಡದು.

ದ್ರೋಣ—ಹಾಗಲ್ಲವಯ್ಯಾ !

ಹನ್ನೆರಡು ವರ್ಷಗಳಿಂದಲೂ ಅವರನ್ನು ಹೇಗಾದರೂ ಕಂಡುಹಿಡಿಯಬೇಕೆಂದು ಬಗೆಬಗೆಯಿಂದ ನೀವಿಷ್ಟುಮಂದಿಯೂ ಪ್ರಯತ್ನಪಟ್ಟರೂ ಅವರ ಸುಳಿವೇ ತಿಳಿಯದಿರುವುದು. ಹೀಗಿರುವಲ್ಲಿ ನಾನು ಅವರನ್ನು ಐದುರಾತ್ರಿಗಳೊಳಗಾಗಿ ಕಂಡು ಕರೆತರಬೇಕೇ? ಇದು ಸಾಧ್ಯವೇ? ಇಷ್ಟೊಂದು ನಿಮಗೇಕೆ ಕಷ್ಟವು? ಸ್ಪಷ್ಟವಾಗಿ ಕೊಡುವುದಿಲ್ಲವೆಂತಲೇ ಹೇಳಬಾರದೇ ?

ಭೀಷ್ಮ—ಪೌತ್ರನೇ! ದುರ್ಯೋಧನನೇ ! ಧರ್ಮವೆಂದರೇನು? ನಿರ್ನಿಮಿತ್ತವಾಗಿ ಮಾಡಿದರಲ್ಲವೇ ಧರ್ಮವೆನಿಸುವುದು? ಯಾವುದೋ ಒಂದು ನೆಪದಿಂದ ಏನನ್ನೋ ಮನಸ್ಸಿನಲ್ಲಿ ಬಗೆದು ಮಾಡಿದರೆ, ಅದೂ ಧರ್ಮವೆನಿಸುವುದೇ ? ಹೀಗಾದರೆ ನನಗೂ ಬಹಳ ಸಂತೋಷ. ಪೌತ್ರನೇ ! ನೋಡು.

ಪಾಂಡವರು ಒಂದು ವರ್ಷದಲ್ಲಿಯೇ ಬರಲಿ. ಇಲ್ಲವೇ ನೂರು ವರ್ಷಗಳು ಕಳೆದು ಬರಲಿ. ಯಾವಾಗಲಾದರೂ ಬರಲೊಲ್ಲರೇಕೆ ? ಪಾಂಡವರ ರಾಜ್ಯವನ್ನು ಹಂಚಿ ಕೊಡು. ಇದಕ್ಕೆ ನೀನು ಸಮ್ಮತಿಸಿದರೆ ಸರಿ. ಅವರು ಯಾವಾಗ ಬಂದರೇನು ? ಅದನ್ನೆಲ್ಲಾ ಈಗ ನಿಷ್ಕರ್ಷೆ ಮಾಡಿ ಆಗಬೇಕಾದುದಾವದೂ ಏನು ? ವತ್ಸಾ ! ನೀನು ನಿನ್ನ ಭಾಷೆಯನ್ನು ಪುಸಿಯಾಗಿಸದಿದ್ದರೆ ಸರಿ. ನಿನ್ನ ಪ್ರತಿಜ್ಞೆಯು ಮಾತ್ರ ದಿಟವಾಗಿರಲಿ. ಕೌರವರೂ, ಕೌರವರ ಸಭೆಯೂ ಸತ್ಯಪ್ರತಿಜ್ಞೆಗೆ ತಪ್ಪುವುದಿಲ್ಲವೆಂದು ಲೋಕದಲ್ಲಿ ಖ್ಯಾತಿಗೊಂಡಿರುವುದಲ್ಲವೇ ? ಇದುವರೆಗೆ ಅನೂಚಾನವಾಗಿ ಬಂದಿರುವ ಖ್ಯಾತಿಯನ್ನು ನೀರುಪಾಲುಮಾಡಿ, ವಂಶಕ್ಕೆ ಅಪಖ್ಯಾತಿಯನ್ನು ತಂದೊಡ್ಡಿ, ನೀನೂ ಜನಗಳ ಬಾಯಿಗೆ ಗುರಿಯಾಗದಿರು.

ದುರ್ಯೋ—ನನ್ನ ನಿಶ್ಚಯವೂ ಅಂತೆಯೇ ಇರುವುದು.

ದ್ರೋಣ—(ಆತ್ಮಗತಂ) ಈಗ ನನ್ನ ಆಶೆಯು ಕಾರ್ಯಲೋಭದಿಂದ, ಹಿಂದೆ ನೂರು ಗಾವುದದ ಅಗಲವಾದ ಕಡಲನ್ನು ದಾಟಿ, ಕಾಣದಿದ್ದ

ಸೀತೆಯನ್ನು ಕಂಡುಬಂದ ಹನುಮಂತನ ಭಾವವನ್ನು ತಳೆದಿರುವುದು.

ಅದರಿಂದ ಈಗ ನಾನು ಪಾಂಡವರ ಸಮಾಚಾರವನ್ನು ತಿಳಿದು ತರುವುದೆಲ್ಲಿಂದ? ಇದಕ್ಕೇನು ಉಪಾಯಮಾಡಲಿ?

ಭಟ—(ಪ್ರವೇಶಿಸಿ) ಮಹಾರಾಜನೇ; ಲಾಲಿಸು. ವಿರಾಟನ ರಾಜಧಾನಿಯಿಂದ ದೂತನು ಬಂದಿರುವನು.

ಎಲ್ಲರೂ—ತಡೆಯೇನು? ಬೇಗನೆ ಒಳಕ್ಕೆ ಬರಹೇಳು.

ಭಟ—ಅಪ್ಪಣೆ (ಎಂದು ತೆರಳುವನು).

ದೂತ—(ಹೊಕ್ಕು) ಮಹಾಪ್ರಭುವೇ! ಮಂಗಳವಾಗಲಿ. ಲಾಲಿಸಬೇಡುವೆನು.

ಎಲ್ಲರೂ—ಏನು? ವಿರಾಟೇಶ್ವರನು ಬಂದನೆ!

ಭಟ—ಮನಸ್ಸಿಗೆ ಸಮಾಧಾನವಿಲ್ಲದುದರಿಂದ ಬರುವುದಿಲ್ಲವಂತೆ!

ಎಲ್ಲರೂ—ಅವನ ಮನಸ್ಸಿಗೆ ಅಸಮಾಧಾನಕಾರಣವಾವುದು?

ಭಟ—ಜೀಯಾ! ಅವಧರಿಸು. ಅವನ ಆಪ್ತಬಾಂಧವರಾದ ಕೀಚಕ, ಉಪಕೀಚಕರೆಂಬ ನೂರುಮಂದಿ ಅಣ್ಣತಮ್ಮಂದಿರನ್ನು ರಾತ್ರಿಯ ವೇಳೆಯಲ್ಲಿ ಯಾವನೋ ಒಬ್ಬನು ಬಾಹುಬಲದಿಂದಲೇ ಕೊಂದಿರುವನಂತೆ! ಮೈಮೇಲೆ ಎಲ್ಲಿ ನೋಡಿದರೂ ಆಯುಧದ ಗಾಯವೇ ಇಲ್ಲ. ಶಸ್ತ್ರವನ್ನು ಉಪಯೋಗಿಸದೆಯೇ ಕೊಂದಿರುವುದೂ ದಿಟ. ಅದುಕಾರಣ ಬರಲು ಮನಸ್ಸಿಗೆ ಇಷ್ಟವಿಲ್ಲ.

ಎಲ್ಲರೂ—ಏನು? ಶಸ್ತ್ರವಿಲ್ಲದೆಯೇ ಕೊಲೆಯೆ? ಒಂದೇ ಕಾಲದಲ್ಲಿಯೇ ನೂರುಮಂದಿಯೂ ಕೊಲೆಗೆ ಈಡಾದರೇ?

ಭೀಷ್ಮ—ಏನು? ಆಯುಧವಿಲ್ಲದ ಕೊಲೆಯೆಂದು ಹೇಳಿದೆಯಾ? (ದ್ರೋಣನ ಕಡೆ ತಿರುಗಿ) ಸ್ವಾಮಿ; ಆಚಾರ್ಯರೇ! ಐದುರಾತ್ರಿಗಳ ಗಡುವನ್ನು ಒಪ್ಪಿಕೊಳ್ಳಿರಿ. ಹಿಂಜರಿಯಬೇಡಿರಿ. ಸಮ್ಮತಿಸಿರಿ. ಯೋಚಿಸಬೇಡಿರಿ.

ದ್ರೋಣ—ಲಾಭವೇನು?

ಭೀಷ್ಮ—ಇದು ಬಾಹುಬಲಶಾಲಿಯಾದ ಭೀಮಸೇನನ ಲೀಲೆಯು. ಇದರಲ್ಲಿ ಎಷ್ಟುಮಾತ್ರವೂ ಸಂದೇಹವಿಲ್ಲ. ಈ ನೂರು ಮಂದಿ ಅಣ್ಣತಮ್ಮಂದಿರ ಮೇಲೆ ತನಗಿದ್ದ ರೋಷವನ್ನೆಲ್ಲಾ ಅಲ್ಲಿ ಉಪಯೋಗಿಸಿ ತೀರಿಸಿಕೊಂಡಿರುವನೆಂದು ದೃಢವಾಗಿ ಹೇಳಬಲ್ಲೆನು.

ದ್ರೋಣ—ಅಲ್ಲಿಯೇ ಪಾಂಡವರಿರುವುದೇನು ನಿಶ್ಚಯ? ನೀನು ಹೇಗೆ ಬಲ್ಲೆ?

ಭೀಷ್ಮ—ಹೊಳೆಯ ಎರಡು ಪಕ್ಕಗಳಲ್ಲಿಯೂ ದಡವು ಅಲ್ಲಲ್ಲಿ ಅಗೆದಂತೆ ಕಂಡುಬಂದರೆ ಇದು ಕರುಗಳ ಬಾಲಚೇಷ್ಟೆಯನ್ನು ಸೂಚಿಸುವ ಎಳೆ ಕೊಂಬುಗಳ ಕಾರ್ಯವೆಂದು ಗೂಳಿಗಳು ತಿಳಿಯಲಾರವೇನು? ಚೆನ್ನಾಯಿತು. ಇದೂ ವಿಶದವಾಗಿ ಹೇಳಬೇಕೇ?

ದ್ರೋಣ—ಏನು? ಗೂಳಿಯೆಂದು ಹೇಳುವೆಯಲ್ಲವೇ? ಭಲಾ! ಹಾಗಾದರೆ ನಮ್ಮ ಕಾರ್ಯವು ಕೈಗೂಡಿತು. (ಪ್ರಕಾಶಂ) ಪುತ್ರನೆ; ದುರ್ಯೋಧನನೆ! ಇರಲಿ. ಐದು ರಾತ್ರಿಗಳ ಗಡುವೇ ಇರಲಿ.

ದುರ್ಯೋ—ಆಹಾ! ಅವಶ್ಯವಾಗಿ ಆಗಬಹುದು.

ದ್ರೋಣ—ಯಜ್ಞವನ್ನು ನೋಡಲು ಬಂದಿರುವ ಅರಸುಗಳಿರಾ! ನೀವೆಲ್ಲರೂ ಕಿವಿಗೊಟ್ಟು ಕೇಳಿರಿ. ಪೂಜ್ಯನಾದ ಕುರುಕುಲಸಾರ್ವಭೌಮನೆನಿಸಿದ ದುರ್ಯೋಧನನು-ಅಲ್ಲ-ಅವನೊಬ್ಬನೇ ಅಲ್ಲ-ಸೋದರಮಾವನಾದ ಶಕುನಿಯೊಡಗೂಡಿ ನಿಷ್ಕರ್ಷೆ ಮಾಡಿರುವನು. ಐದು ರಾತ್ರಿಗಳೊಳಗಾಗಿ ಪಾಂಡವರ ಸಮಾಚಾರವನ್ನು ತಂದರೆ ಅರ್ಧ ರಾಜ್ಯವನ್ನು ಕೊಡುವನಂತೆ! ಇವಕ್ಕೆ ನೀವೆಲ್ಲರೂ ಸಾಕ್ಷಿ. (ದುರ್ಯೋಧನನನ್ನು ನೋಡಿ) ಮಗೂ! ಇದೇ ಅಲ್ಲವೇ ನಿನ್ನ ಪ್ರತಿಜ್ಞೆ?

ದುರ್ಯೋ—ಮತ್ತೇನು? ಅಷ್ಟೇ ನಾನೂ ಹೇಳಿದುದು.

ದ್ರೋಣ—ಮುಮ್ಮಾರು ಬಾರಿಗೂ ಕೊಡುವೆಯಲ್ಲವೇ? ನಿಜವಾಗಿ ಹೇಳು.

ಶಕುನಿ—ಈಗೇತಕ್ಕೆ ಮಾತನಾಡಬೇಕು? ಸಮಯಬಂದಾಗಲಲ್ಲವೇ ಮಾತನಾಡಬೇಕು! ಇರಲಿ. ತಿಳಿಯುವೆನು. ಯಾರು ಕೊಡು

ವರೋ, ಹೇಗೆ ತೆಗೆದುಕೊಳ್ಳುವರೋ, ನೋಡದೆ ಇರುವೆನೇ?

ದ್ರೋಣ—ಗಾಂಗೇಯನೇ ! ನನ್ನ ಮಾತನ್ನು ಕೇಳಿದೆಯಲ್ಲವೇ ? ಸರಿ ತಾನೇ ?

ಭೀಷ್ಮ—(ಆತ್ಮಗತಂ) ಅಯ್ಯೋ! ಪಾಪ! ಏನೂ ಅರಿಯದ ಆಚಾರ್ಯರು ಆ ಮೋಸಗಾರನ ಮಾತಿಗೆ ಮರುಳಾಗಿ ಸಂತೋಷದಿಂದ ಮೈಮರೆತು ನಲಿದಾಡುತ್ತಿರುವರು. ಈ ದುರುಳನ ಮಾತಿನಲ್ಲಿ ನನಗೆ ಎಷ್ಟುಮಾತ್ರವೂ ಭರವಸೆಯಿಲ್ಲ. ಕಪಟಿಯಾದ ದುರ್ಯೋಧನನ ಬೇಳುವೆಯ ಮಾತಿಗೆ ಬೆರಗಾಗಿರುವರು. (ಪ್ರಕಾಶಂ) ಪೌತ್ರನೆ! ದುರ್ಯೋಧನನೆ! ವಿರಾಟನಿಗೂ, ನನಗೂ ಬಹುಕಾಲದಿಂದಲೂ ಆಂತರಂಗಿಕವಾದ ದ್ವೇಷವಿರುವುದು. ಇಷ್ಟರ ಮೇಲೆ ಈಗ ಅವನು ನಿನ್ನ ಯಜ್ಞವನ್ನು ಅನುಭವಿಸಲು ಬಾರದಿರುವನೆಂದು ಬೇರೆ ಇಮ್ಮಡಿಯಾಗಿರುವುದು. ಅವನು ಬಾರದಿರುವುದು ನನಗೆ ಸುತರಾಂ ಸಮಾಧಾನವಿಲ್ಲ. ಅದರಿಂದ ಈಗಲೇ ನಾವು ಹೊರಟು ಅವನ ಗೋಧನವನ್ನು ಅಪಹರಿಸುವ, ನಡೆ. ಅವನೂ ಬಲಕ್ಕೆ ಮುರಿದವನಂತೆ ಬಲಿಷ್ಠರಾದ ನೂರುಮಂದಿ ಕೀಚಕರನ್ನೂ ನೀಗಿಕೊಂಡು ಮರುಗುತ್ತಿರುವನು. ಇದೇ ತಕ್ಕ ಸಮಯವು.

(ದ್ರೋಣನ ಕಡೆಗೆ ತಿರುಗಿ ಮರೆಯಾಗಿ) ಆಚಾರ್ಯರೇ! ತಾವು ಬ್ರಾಹ್ಮಣರಾದ ಪ್ರಯುಕ್ತ ತಮಗೆ ಇವರ ತಂತ್ರವು ತಿಳಿಯದು. ಇವರಿಗೆಲ್ಲಾ ನಾನೇ ಗುರುವು. ತಾವು ಏನೂ ತಿಳಿದವರಲ್ಲ! ನೋಡಿರಿ.

ನಾವು ಇಲ್ಲಿಂದ ಗೋಗ್ರಹಣವನ್ನು ನೆಪಮಾಡಿ ಇವನನ್ನು ಹೊರಡಿಸಿದರೆ, ರಥದ ಶಬ್ದವು ಕಿವಿಗೆ ಬಿದ್ದಕೂಡಲೇ ಗವಿಯೊಳಗೆ ಮಲಗಿದ್ದ ಸಿಂಹವು ಆನೆಯ ಘೀಂಕಾರವನ್ನು ಕೇಳಿ, ಎಚ್ಚತ್ತು ಹೊರಗೆ ಬರುವಂತೆ ಪಾಂಡವರ ರೋಷವು ಇಮ್ಮಡಿಯಾಗಿ, ಮುಂದುವರಿದು ಯುದ್ಧಮಾಡದಿರಲಾರರು. ಅವರಲ್ಲಿ ಕೃತಜ್ಞತೆಯು ಚೆನ್ನಾಗಿರುವುದು. ವಿರಾಟನ ಪರವಾಗಿ ಪಾಂಡವರು ಯುದ್ಧಕ್ಕೆ ಹೊರಟರೆ ಸಾಕು, ಮುಂದಿನ ಕೆಲಸವು......... ...............

ಭಟ—(ಪ್ರವೇಶಿಸಿ) ಜೀಯಾ ! ಅವಭೃಥಸ್ನಾನವಾದ ಬಳಿಕ ಪಟ್ಟಣದ ಮೆರೆವಣಿಗೆಗಾಗಿ ತೇರುಗಳೂ, ಆನೆಗಳೂ, ಕುದುರೆಗಳೂ, ರಾವುತರೂ ಸಿದ್ಧವಾಗಿ, ಅರಮನೆಯ ಮುಂದೆ ನಿಂತು, ಆಳಿದವರ ಅನುಗ್ರಹವನ್ನು ಬಯಸಿರುವರು. ಪಟ್ಟಣವನ್ನು ಪ್ರವೇಶಿಸುವುದಕ್ಕೆ ಮುಹೂರ್ತವು ಸುಮುಹೂರ್ತವಾಗಿರುವುದು.

ದುರ್ಯೋ—ಹಾಗಾದರೆ, ಇದೇ ಮುಹೂರ್ತದಲ್ಲಿಯೇ ಈಗ ಸಿದ್ಧವಾಗಿರುವ ಚತುರಂಗ ಸೇನೆಯೊಡನೆ ಬೇಗನೆ ಹೊರಟು, ಅವನ ಗೋವುಗಳನ್ನು ಅಡ್ಡ ಹಾಕಿ ಹಿಡಿತರುವ, ನಡೆಯಿರಿ. ಯಜ್ಞದೀಕ್ಷೆಯನ್ನು ಕೈಕೊಂಡುದು ಮೊದಲು ಶಾಂತವಾಗಿದ್ದ ನನ್ನ ಗದೆಯೂ ಸಿಟ್ಟುಗೊಂಡು ಮರಳಿ ನನ್ನ ಕೈಯಲ್ಲಿರುವುದು.

ದ್ರೋಣ—ಹಾಗಾದರೆ ನನ್ನ ರಥವನ್ನು ತರುವಂತೆ ದೂತರನ್ನು ಕಳುಹಿಸು.

ಶಕುನಿ—ನನ್ನ ಆನೆಗೆ ಅಂಬಾರಿ ಹಾಕಿ ಸಿದ್ಧಗೊಳಿಸಹೇಳು.

ಕರ್ಣ—ಉತ್ತಮವಾದ ತೇಜಿಗಳನ್ನು ಹೂಡಿದ ನನ್ನ ರಥವನ್ನು ತರಹೇಳು.

ಭೀಷ್ಮ—ವಿರಾಟನಗರವನ್ನು ಕುರಿತು ತೆರಳಲು ನನ್ನ ಬುದ್ಧಿಯೂ, ಧನುಸ್ಸೂ ಹೆಚ್ಚಿನ ತವಕದಿಂದ ನನ್ನನ್ನು ತ್ವರೆಪಡಿಸುತ್ತಿರುವುವು.

ದುರ್ಯೋ—ಬಿಲ್ಲನ್ನು ತೊರೆದು ನೀನಿಲ್ಲಿಯೇ ಸುಖವಾಗಿರು. ವಿಧೇಯನಾದ ನಾನು ನಿನ್ನ ಆಣತಿಯನ್ನು ಶಿರಸಾವಹಿಸಿ ನಡೆಯಲು ಸಿದ್ಧನಾಗಿರುವಲ್ಲಿ ನಿನಗೇಕೆ ತೊಂದರೆ ?

ದ್ರೋಣ—ಪುತ್ರನೇ ; ದುರ್ಯೋಧನನೆ ! ರಣರಂಗದಲ್ಲಿ ನಿನ್ನ ಸಾಹಸವನ್ನೂ, ಪರಾಕ್ರಮವನ್ನೂ ನೋಡಬೇಕೆಂದು ನಾವಿಬ್ಬರೂ ಕುತೂಹಲದಿಂದಿರುವೆವು. ಅದರಿಂದ ನಮ್ಮನ್ನೂ ಕರೆದುಕೊಂಡು ಹೋಗು.

ದುರ್ಯೋ—ಗುರುವರೇಣ್ಯನೇ ! ತಮ್ಮ ಇಷ್ಟವಿದ್ದಂತಾಗಲಿ.

ದ್ರೋಣ—ವತ್ಸ ; ಗಾಂಧಾರರಾಜಾ ! ಈ ಗೋಗ್ರಹಣ ಯುದ್ಧದಲ್ಲಿ ನಿನ್ನ ರಥವು ಮೊತ್ತಮೊದಲು ಮುಂಭಾಗದಲ್ಲಿ ಹೊರಡಬೇಕು.

ನಾವಿಬ್ಬರೂ ಮುದುಕರು. ಸಾಹಸವನ್ನು ತೋರುವ ಪ್ರಾಯವು ಗಳಿತವಾಗಿರುವುದು. ನಾವು ಹಿಂದುಳಿಯುವೆವು. ನೀನೇ ಮೊದಲು ಹೊರಡು.

ಶಕುನಿ—ಒಳ್ಳೆಯದು. ಅದಕ್ಕೇನು? ಅವಶ್ಯವಾಗಿಯೂ ಆಗಲಿ. ಮೊದಲನೆಯ ಕಲ್ಪವಲ್ಲವೇ ತಾವು ಸೂಚಿಸಿದುದು!

(ಎಂದೆಲ್ಲರೂ ತೆರಳುವರು.)

ಇಂತಿದು ಮೊದಲನೆಯ ಅಂಕವು.



## ಎರಡನೆಯ ಅಂಕ.



ಮುದಿಗೊಲ್ಲ—(ಪ್ರವೇಶಿಸಿ) ನನ್ನ ಆಕಳು, ಕರುಗಳು ದಿನದಿನವೂ ಹೆಚ್ಚಲಿ! ಗೊಲ್ಲಮಡದಿಯರು ಸುಮಂಗಲಿಯರಾಗಿರಲಿ! ನಮ್ಮ ಅರಸನಾದ ವಿರಾಟರಾಜನು ಭೂಮಂಡಲಕ್ಕೆಲ್ಲಾ ಒಬ್ಬನೇ ಅರಸನಾಗಿ ರಾಜ್ಯವನ್ನು ಹೀಗೆಯೇ ಪರಿಪಾಲಿಸುತ್ತಿರಲಿ. ಈ ದಿನ ನಮ್ಮ ರಾಜನಿಗೆ ಹುಟ್ಟಿದಹಬ್ಬವಾದ ಪ್ರಯುಕ್ತ ಗೊಲ್ಲ ಹುಡುಗರೂ, ಹುಡುಗಿಯರೂ ಸಿಂಗರಿಸಿಕೊಂಡು, ಹೋಳಿಗೆ ಕಡಬುಗಳನ್ನು ಜಡಿದು ತಿಂದು, ತಮ್ಮ ತಮ್ಮ ದನಕರುಗಳನ್ನು ಹಿಂಡುಹಿಂಡಾಗಿ ಮುಂದೆ ಬಿಟ್ಟುಕೊಂಡು ಪಟ್ಟಣದ ರಾಜಬೀದಿಯಲ್ಲಿ ಹೋಗುವರು. ಗೋವುಗಳನ್ನೆಲ್ಲಾ ಅದಕ್ಕಾಗಿಯೇ ಮೈತೊಳೆದು ಅಲಂಕಾರ ಮಾಡುವಂತೆ ಹೇಳಬಂದಿರುವೆನು. ಭಲಾ! ಈ ದಿವಸ ನನಗೆ ಸರಿಯಾರು? ವಿರಾಟರಾಜನಂತೆಯೇ ನಾನೂ ಗೊಲ್ಲರ ರಾಜ! ಈ ಗುಂಪುಗಳನ್ನೆಲ್ಲಾ ಹಿಂದೆ ಬಿಟ್ಟು, ನಾನು ಮುಂದೆ ನಡೆಯುತ್ತಾ ನನ್ನ ಅಧಿಕಾರವನ್ನು ಈ ದಿವಸ ತೋರಿಸು

ವೆನು. ನಾನು ಇವರಿಗೆಲ್ಲಾ ಹಿರಿಯುವನಾದುದರಿಂದ ಈ ದಿವಸವಾದರೂ ಗೌಡತನವನ್ನು ನಡೆಯಿಸಲೇ ಬೇಕು (ಎಂದು ಮುಂದುವರಿದು) ಛೀ, ಛೀ, ಇದೇನು? ಈ ಕಾಗೆಯು ಬಣಮರದ ಮೇಲೆ ಕುಳಿತು, ಕೊಕ್ಕಿನಿಂದ ಮರವನ್ನು ಕುಕ್ಕುತ್ತ, ಸೂರ್ಯನನ್ನು ನೋಡಿ ವಿಕಾರವಾದ ಧ್ವನಿಮಾಡುತ್ತಿರುವುದು! ಶಾಂತಿಯಾಗಲಿ! ಶಾಂತಿಯಾಗಲಿ! ಗೊಲ್ಲರಿಗೂ, ಗೋವುಗಳಿಗೂ ಕೂಡ ಶಾಂತಿಯಾಗಲಿ! ಪೀಡೆಯು ತೊಲಗಲಿ! ಈಗ ನನ್ನ ಗೌಡತನಕ್ಕೆ ತಕ್ಕಂತೆ ನನ್ನ ಅಧಿಕಾರವನ್ನು ಸೂಚಿಸಿ, ಗೊಲ್ಲರಿಗೆಲ್ಲಾ ಹೇಳುವೆನು. ಗೋಮಿತ್ರಕನೆ! ಗೋಮಿತ್ರಕನೆ!

ಗೋಮಿತ್ರಕ—(ಪ್ರವೇಶಿಸಿ) ಮಾವಾ! ನಮಸ್ಕಾರಕಾಣ ಮಾವಾ!

ಮುದಿಗೊಲ್ಲ—ನಮ್ಮ ಮತ್ತು ಗೋವುಗಳ ಪೀಡೆಯೆಲ್ಲಾ ತೊಲಗಲಿ! ಎಲೋ ಗೋಮಿತ್ರಕಾ! ಮಹಾರಾಜನಾದ ವಿರಾಟನಿಗೆ ಹುಟ್ಟಿದ ಹಬ್ಬವಾದ ಪ್ರಯುಕ್ತ ಈ ದಿನ ಗೋವುಗಳನ್ನು ದಾನಮಾಡುತ್ತಾನೆ. ಅದಕ್ಕಾಗಿ ಗೋವುಗಳನ್ನೆಲ್ಲಾ ಸಿಂಗರಿಸಿ, ನೀವೆಲ್ಲರೂ ಸಿಂಗಾರಮಾಡಿಕೊಂಡು ಬರಬೇಕು. ಎಲ್ಲರಿಗೂ ಹೇಳು. ನಮ್ಮ ಪಾಳೆಯದ ಹುಡುಗರೂ, ಹುಡುಗಿಯರೂ ಎಲ್ಲರೂ ಪಟ್ಟಣದ ನಡುಬೀದಿಯಲ್ಲಿ ಗೋವುಗಳ ಹಿಂದೆ ತೆರಳಬೇಕು. ಬೇಗನೆ ಎಲ್ಲರೂ ಸಿಂಗರವಾಗುವಂತೆ ಹೇಳು. ಎಲೋ ಗೋಮಿತ್ರಕಾ! ಮುಂಚಿತವಾಗಿ ಹುಡುಗರಿಗೂ, ಹುಡುಗಿಯರಿಗೂ ಹೇಳು.

ಗೋಮಿತ್ರಕ—ಮಾವಾ! ನಿನ್ನ ಅಪ್ಪಣೆಗೆ ಇದಿರು ಇರುವುದೇ? ಎಲೌ ಗೋರಕ್ಷಿಣಿಕೆ! ಎಲೋ ಘೃತಪಿಂಡ! ಸ್ವಾಮಿನಿ! ವೃಷಭದತ್ತ! ಕುಂಭದತ್ತ! ಮಹಿಷದತ್ತ! ಭನ್ನಿರಿ! ಬನ್ನಿರಿ! ಬೇಗಬನ್ನಿರಿ!

(ಎಲ್ಲರೂ ಬಂದು) ಮಾವಾ! ನಮಸ್ಕಾರ.

ಮುದಿಗೊಲ್ಲ—ನಮ್ಮ ಮೇಲಣ ಪೀಡೆಯೂ, ಗೋವುಗಳ ಮೇಲಣ ಪೀಡೆಯೂ ಪರಿಹಾರವಾಗಲಿ. ವಿರಾಟ ಮಹಾರಾಜನ ವರ್ಷವರ್ಧಂತಿಯಾದ ಪ್ರಯುಕ್ತ ಈ ದಿನ ಗೋವುಗಳನ್ನು ದಾನಮಾಡುವನು. ಅದಕ್ಕಾಗಿ ನಾವೆಲ್ಲರೂ ಸಿಂಗರಿಸಿಕೊಂಡು ನಡು

ಬೀದಿಯಲ್ಲಿ ಮೆರೆವಣಿಗೆ ಹೊರಡಬೇಕು. ಅದರಿಂದ ಮುಂಚೆ ಗೋಧನವನ್ನು ನಗರದ ಊರುಬಾಗಿಲಿನಲ್ಲಿ ಮುಂದೆಯಾಗಿ ನಿಲ್ಲಿಸಿರಿ. ಅದುವರೆಗೂ ನಾವೆಲ್ಲರೂ ಇಲ್ಲಿ ಹಾಡುತ್ತಾ, ಕುಣಿಯುತ್ತಾ ವಿನೋದವಾಗಿ ಕಾಲ ಕಳೆಯುವ.

ಎಲ್ಲರೂ—ಮಾವಾ ! ನಿನ್ನ ಅಪ್ಪಣೆಯಂತಾಗಲಿ. (ಎಲ್ಲರೂ ಹಾಡುತ್ತಾ ಕುಣಿಯುವರು)

ಮುದಿಗೊಲ್ಲ—ಹೀ ! ಹೀ ! ಚೆನ್ನಾಗಿ ಹಾಡಿದಿರಿ. ಚೆನ್ನಾಗಿ ಕುಣಿದಿರಿ.

ಎಲ್ಲರೂ—ಮಾವಾ ; ಮಾವಾ ! ಅದೇನು ? ದೊಡ್ಡ ಕೆಂದೂಳಿಯೆದ್ದಿರುವುದು !

ಮುದಿಗೊಲ್ಲ—ಕೆಂದೂಳಿಯು ಮಾತ್ರವೇ ಅಲ್ಲ. ಶಂಖ, ಕಹಳೆ, ತಪಟೆಗಳ ಶಬ್ದವೂ ಕೇಳಬರುತ್ತಿದೆ.

ಎಲ್ಲರೂ—ಹಗಲಿನಲ್ಲಿಯೂ ಬೆಳದಿಂಗಳಂತೆ ಬಿಳುಪಾದ ಕಾಂತಿಯಿಂದ ಕೂಡಿದ ಸೂರ್ಯಮಂಡಲವು ಮಬ್ಬುಮುಸುಕಿದಂತಿರುವುದು. ಸೂರ್ಯನು ಇರುವನೋ ಇಲ್ಲವೋ ತಿಳಿಯದು.

ಗೋಮಿತ್ರಕ—ಮಾವಾ ! ಮಾವಾ ! ಅಯ್ಯಯ್ಯೋ ! ಇದೇನು ? ಇವರಾರೋ ಮನುಷ್ಯರು ಮೊಸರಿನ ಕರಣೆಯಂತೆ ಬೆಳ್ಳಗಿರುವ ಕೊಡೆಗಳನ್ನು ಹಿಡಿದುಕೊಂಡು, ಬಂಡಿಗೆ ಎತ್ತಿಗೆ ಬದಲಾಗಿ ಕುದುರೆಗಳನ್ನು ಹೂಡಿ, ಅದರಲ್ಲಿ ಕುಳಿತುಕೊಂಡು, ಪಾಳಯವನ್ನೆಲ್ಲಾ ಕೊಳ್ಳೆಹೊಡೆಯುತ್ತಿರುವರು. ಇವರಾರೋ ಸುಲಿಗೆ ಮಾಡುವ ಹಗಲುಕಳ್ಳರಿರಬಹುದು. ಅಯ್ಯಯ್ಯೋ ! ಇನ್ನೇನು ಗತಿ !

ಮುದಿಗೊಲ್ಲ—ಹಾ ! ಹಾ ! ಬಾಣಗಳೂ ಬೀಳುತ್ತಿರುವುವು, ಕಣಾ ! ಹುಡುಗರೇ ! ಹುಡುಗಿಯರೇ ! ಬೇಗನೆ ಪಾಳಯಕ್ಕೆ ಓಡಿಹೋಗಿ ಮನೆಗಳಲ್ಲಿ ಅಟ್ಟದ ಮೇಲೆ ಕುಳಿತುಕೊಂಡು ಬಚ್ಚಿಟ್ಟುಕೊಳ್ಳಿರಿ.

ಎಲ್ಲರೂ—ಮಾವಾ ! ಅಪ್ಪಣೆ (ಎಂದು ಓಡಿಹೋಗುವರು.)

ಮುದಿಗೊಲ್ಲ—ಅಯ್ಯೋ! ಓಡಿಹೋಗಬೇಡಿರಿ; ನಿಲ್ಲಿರಿ! ನಿಲ್ಲಿರಿ! ಹೊಡೆಯಿರಿ! ಹೊಡೆಯಿರಿ! ನಾನು ಈ ಸಮಾಚಾರವನ್ನು ಮಹಾರಾಜನಾದ ವಿರಾಟನಿಗೆ ಅರಿಕೆಮಾಡಿಬರುವೆನು. (ಎಂದು ತೆರಳುವನು.

ಇಂತಿದು ಪ್ರವೇಶಕವು.

ಭಟ—(ಪ್ರವೇಶಿಸಿ) ಅಯ್ಯಾ! ಮಹಾರಾಜನಾದ ವಿರಾಟನರಪಾಲಕನಿಗೆ ತಿಳಿಸಿರಿ. ಬೇಗನೆ ತಿಳಿಸಿರಿ. ಧೃತರಾಷ್ಟ್ರನ ಮಕ್ಕಳು ತಮ್ಮ ಸಾಹಸವನ್ನೆಲ್ಲಾ ಎಲ್ಲಿಯೋ ಬಚ್ಚಿಟ್ಟು, ಕಳ್ಳತನದಿಂದ ಗೋವುಗಳನ್ನು ಅಪಹರಿಸುತ್ತಿರುವರೆಂದು ..................

"ಕರುಗಳೆಲ್ಲಾ ಎಲ್ಲಿಯೋ ಓಡಿಹೋದುವು. ಆಕಳುಗಳೆಲ್ಲವೂ ವ್ಯಥೆಯಿಂದ ಅಲ್ಲಿಂದಿಲ್ಲಿಗೆ ಓಡಾಡುತ್ತಾ ದಿಕ್ಕುತೋರದೆ ಕಣ್ಣೀರು ಸುರಿಸುತ್ತಿರುವುವು. ನೋಡಿದಮಾತ್ರದಿಂದಲೇ ಗೂಳಿಗಳು ಗಾಬರಿಪಟ್ಟು ಗುಟರೆಹಾಕುತ್ತಿರುವುವು. ಎಲ್ಲಿನೋಡಿದರೂ ದನಕರುಗಳ ಆರ್ತನಾದವೇ ತುಂಬಿರುವುದು. ಅಯ್ಯೋ! ಪಾಪ! ಆ ಮೂಗ ಜಂತುಗಳ ದುರವಸ್ಥೆಯನ್ನು ಕಣ್ಣಾರ ನೋಡುವುದಕ್ಕೂ ಶಕ್ಯವಲ್ಲದುದಾಗಿರುವುದು" ಎಂದು.

(ತೆರೆಯಲ್ಲಿ) ಜಯಸೇನನೇ! ಏನು? ಧೃತರಾಷ್ಟ್ರನ ಮಕ್ಕಳೇ?

ಭಟ—ಆರ್ಯನೇ! ಅಹುದು. ಮತ್ತೇನೆಂದಿರುವೆ?

ಕಂಚುಕಿ—(ಪ್ರವೇಶಿಸಿ) ಒಡಹುಟ್ಟಿದವರ ವಿಷಯದಲ್ಲಿಯೇ ದ್ರೋಹವನ್ನು ಎಣಿಸುವ ಕೌರವರಿಗೆ ಇದೊಂದು ಅತಿಶಯವೇ?

ಬಿಲ್ಲನ್ನು ಸಜ್ಜುಗೊಳಿಸಿ, ಕೈಗೆ ಚೀಲವನ್ನು ತೊಟ್ಟು, ಕವಚದಿಂದ ಅಲಂಕೃತರಾಗಿ, ದಿವ್ಯವಾದ ರಥಗಳಲ್ಲಿ ಕುಳಿತು, ವೀರ್ಯಬಲದಿಂದ ಕೊಬ್ಬಿ, ಯುದ್ಧಕ್ಕೆ ಸಿದ್ಧವಾಗಿ ನಿಂತಿರುವರು. ನಮ್ಮ ಅರಸನ ಮೇಲಣ ವೈರವನ್ನೆಲ್ಲಾ ಈ ಬಡಜಂತುಗಳ ಮೇಲೆ ತೀರಿಸಿಕೊಳ್ಳುತ್ತಿರುವರು.

ಜಯಸೇನನೆ! ಇಂದು ಮಹಾರಾಜನ ಜನ್ಮನಕ್ಷತ್ರವಾದ ಕಾರಣ, ಶಾಂತಿಕರ್ಮವನ್ನು ನಡೆಯಿಸುತ್ತಿರುವ ವೇಳೆಯಲ್ಲಿ ನಾನು ಈ ಸಮಾಚಾರವನ್ನು ತಿಳಿಸಿದರೆ, ಮಹಾರಾಜನು ಸಿಟ್ಟಾಗುವನು. ಅದರಿಂದ ಶಾಂತಿಕರ್ಮವು ಮುಗಿದ ಕೂಡಲೇ ಸಮಯವರಿತು ತಿಳಿಸುವೆನು.

ಭಟ—ಆರ್ಯನೇ! ಸಮಯವು ಮಿಂಚಿಹೋದ ಬಳಿಕ ತಿಳಿಸಿ ಫಲವೇನು? ಹೇಗಾದರೂ ಬೇಗನೆ ಅರಿಕೆ ಮಾಡು.

ಕಂಚುಕಿ—ಹಾಗಾದರೆ ಈಗಲೇ ಅರಿಕೆಮಾಡುವೆನು.

ರಾಜ—(ಪ್ರವೇಶಿಸಿ) ಅಯ್ಯೋ! ಇದೇನು ಅನ್ಯಾಯವು! ಕರುಗಳೆಲ್ಲಾ ದಿಕ್ಕುಪಾಲಾಗಿ ಓಡಿಹೋದವಂತೆ! ಗೋವುಗಳನ್ನೆಲ್ಲಾ ಹಿಡಿದು ತೆಗೆದುಕೊಂಡು ಹೋಗುತ್ತಿರುವರಂತೆ! ರಥದ ಧ್ವನಿಯನ್ನು ಕೇಳಿ ದನಗಳೆಲ್ಲವೂ ಹೆದರಿ ಗಾಬರಿಪಟ್ಟಿರುವುವಂತೆ! ಇಂತಿದ್ದರೂ ಮಾಂಸಪುಷ್ಟವಾಗಿ ಬಲಿತು, ದಿವ್ಯವಾದ ಚಂದನವನ್ನು ಪೂಸಿ, ನಾಚಿಕೆಯಿಲ್ಲದಿರುವ ತೋಳು, ಈ ನನ್ನ ತೋಳು ಮೃಷ್ಟಾನ್ನವನ್ನು ಸವಿನೋಡುತ್ತಿರುವುದು.

ಜಯಸೇನಾ! ಜಯಸೇನಾ!

ಭಟ—(ಪ್ರವೇಶಿಸಿ) ಮಹಾರಾಜನಿಗೆ ಜಯವಾಗಲಿ!

ವಿರಾಟ—ಸಾಕು. ಸಾಕು. ನಾನು ಮಹಾರಾಜನೇ ಆಗಿದ್ದರೆ ಕೌರವರು ಈ ರೀತಿ ನಿರ್ಭಯವಾಗಿ ನನ್ನ ದನಕರುಗಳನ್ನು ನಡುಹಗಲಿನಲ್ಲಿ ಒಯ್ಯುತ್ತಿದ್ದರೇ? ನನ್ನ ಕ್ಷತ್ರಿಯತನವನ್ನು ಲೋಕದಲ್ಲೆಲ್ಲಾ ಈಡಾಡಿದರು. ರಣರಂಗದ ಸಮಾಚಾರವನ್ನು ಬಿತ್ತರಿಸು.

ಭಟ—ಅಪ್ರಿಯವಾರ್ತೆಯನ್ನು ಬಿತ್ತರಿಸುವುದು ಉಚಿತವಲ್ಲ. ಜೀಯಾ! ಸಂಗ್ರಹವಾಗಿ ಬಿನ್ನವಿಸುವೆನು.

ತೇರುಗಳ ತುಳಿತದಿಂದ ಎದ್ದ ಕೆಂದೂಳಿಯು ಗೋವುಗಳ ಮೈಮೇಲೆ ಮುಸುಕಿಕೊಂಡು ಎಲ್ಲವೂ ಒಂದೇ ಬಣ್ಣವಾಗಿರುವುವು. ಆದರೆ ಚಾಟಿಯಿಂದ ಬಲವಾಗಿ ಹೊಡೆದು ಬಾಸುಂಡೆ ಕಟ್ಟಿರುವ ಎಡೆಗಳಲ್ಲಿ ಮಾತ್ರ ಬಗೆಬಗೆಯ ಬಣ್ಣಗಳು ಕಂಡುಬರುವುವು.

ವಿರಾಟ—ಹಾಗಾದರೆ—

ಬಿಲ್ಲನ್ನು ಬೇಗನೆ ತೆಗೆದುಕೊಂಡು ಬಾ. ರಥವನ್ನು ಸಿದ್ಧಗೊಳಿಸುವಂತೆ ಹೇಳು. ರಾಜ್ಯದಲ್ಲಿ ಮಮತೆಯೂ, ನನ್ನಲ್ಲಿ ಭಕ್ತಿಯೂ, ದನಕರುಗಳ ಮೇಲೆ ಕನಿಕರವೂ ಯಾರಾರಿಗೆ ಇರುವುದೋ ಅವರನ್ನೆಲ್ಲಾ ಬರಹೇಳು. ಗೋವುಗಳ ಸಲುವಾಗಿ ರಣಮುಖದಲ್ಲಿ ಮಡಿದರೂ ವ್ಯರ್ಥವಾಗಲಾರದು. ಗೋವುಗಳನ್ನು ಬಿಡಿಸಿ, ಸುಖವಾಗಿ ಹಿಂದಿರುಗಿದರಂತೂ ಕೀರ್ತಿಯು ಮಾತ್ರವೇ ಅಲ್ಲದೆ ವಿಶೇಷವಾದ ಧರ್ಮವೂ ಉಂಟು.

ಭಟ—ಮಹಾರಾಜನ ಅಪ್ಪಣೆ (ಎಂದು ತೆರಳುವನು.)

ವಿರಾಟ—(ಯೋಚಿಸಿ) ದುರ್ಯೋಧನನಿಗೆ ಇಷ್ಟೊಂದು ಕೋಪ ಬರುವುದಕ್ಕೆ ಕಾರಣವೇನು? ನನಗೂ ಅವನಿಗೂ ಹಿಂದಣ ವೈರವೂ ಇಲ್ಲವಲ್ಲಾ! ಆಹಾ! ತಿಳಿಯಿತು. ಅವನ ಯಜ್ಞಕಾಲದಲ್ಲಿ ನಾನು ಹೋಗಲಿಲ್ಲವೆಂದೇನಾದರೂ ಮುನಿಸಿರಬಹುದೋ ಏನೋ! ಹೋಗಬೇಕಾಗಿದ್ದಿತು. ಆದರೆ ಹೋಗುವುದುತಾನೇ ಹೇಗೆ? ಕೀಚಕವಧೆಯಿಂದ ಮನಸ್ಸು ಇನ್ನೂ ಕಳವಳಗೊಂಡಿರುವುದು. ಅಥವಾ, ಪರೋಕ್ಷವಾಗಿ ನಾನು ಪಾಂಡವರಕಡೆಯವನೆಂದು ತಿಳಿದೇನಾದರೂ ಕೈಮಾಡತೊಡಗಿದನೊ? ಹೇಗಾದರೂ ಆಗಲಿ ಯುದ್ಧವನ್ನು ಮಾತ್ರ ಮಾಡಿಯೇ ತೀರಬೇಕು. ಎಷ್ಟುಮಾತ್ರವೂ ಹಿಂಜರಿಯಬಾರದು. ನಮ್ಮ ಆಸ್ಥಾನದಲ್ಲಿರುವ ಪರಿವ್ರಾಜಕೇಶ್ವರನು ಬಹುಕಾಲ ಪಾಂಡವರ ಆಸ್ಥಾನದಲ್ಲಿದ್ದವನು. ಹಸ್ತಿನಾಪುರವಾಸದಿಂದ ದುರ್ಯೋಧನನ ಸಮಾಚಾರವನ್ನೆಲ್ಲಾ ಆತನು ಚೆನ್ನಾಗಿ ಬಲ್ಲವನು. ಒಂದುವೇಳೆ—

"ಈತನನ್ನು ನಾನು ಕರೆಯಿಸಿ ಕೇಳಿದರೂ ದುರ್ಯೋಧನನ ದೋಷಗಳನ್ನೆಲ್ಲಾ ಹೇಳುವನೋ ಇಲ್ಲವೋ! "ಕಾರ್ಯವಾಸಿ ಕತ್ತೆಯ ಕಾಲು ಕಟ್ಟು" ಎಂಬಂತೆ ಏನಾದರೂ ಹೇಳಲಿ! ಈಗ ಕಾರ್ಯವು ನನ್ನದಾಗಿರುವುದರಿಂದ ಕೇಳಿಯೋಚಿಸುವೆನು. ಈಗ ನಾನು ಯಾಚಕನಾದರೂ ಬಾಧಕವಿಲ್ಲ" ಯಾರಲ್ಲಿ?

ಭಟ—(ಪ್ರವೇಶಿಸಿ) ಜೀಯಾ; ಏನಪ್ಪಣೆ?

ವಿರಾಟ—ನಮ್ಮ ಭಗವಂತನನ್ನು ಕರೆ.

ಭಟ—ಅಪ್ಪಣೆ. (ಎಂದು ತೆರಳುವನು.)

ಭಗವಂತನು—(ಪ್ರವೇಶಿಸಿ ಸುತ್ತಲೂ ನೋಡಿ) ಏನಿದು? ಎಷ್ಟೊಂದು ಸಂಭ್ರಮ? ಆನೆಗಳಿಗೆಲ್ಲಾ ಅಂಬಾರಿ ಹಾಕಿರುವರು. ರಾವುತರು ಕವಚಗಳನ್ನು ತೊಟ್ಟು ಬಿಲ್ಲುಬಾಣಗಳನ್ನು ಸಜ್ಜುಗೊಳಿಸುತ್ತಿರುವರು! ರಥಗಳಿಗೆಲ್ಲಾ ನೊಗಗಳನ್ನು ಬಿಗಿಯುತ್ತಿರುವರು. ಯೋಧವೀರರು ನಡುಕಟ್ಟುಗಳನ್ನು ಸರಿಪಡಿಸುತ್ತಿರುವರು! ಇದನ್ನೆಲ್ಲಾ ನೋಡಿದರೆ ಹಿಂದೆ ಇದುವರೆಗೆ ಯಾವಾಗಲೂ ಇಲ್ಲದಿರುವ ಹೊಸದಾದ ಅಂಜಿಕೆಯು ನನ್ನ ಅಂತರಂಗವನ್ನು ಆವರಿಸುತ್ತಿರುವುದು! ಆದರೆ ನನ್ನ ವಿಷಯದಲ್ಲಿ ನನಗೆ ಯಾವಾಗಲೂ ಹೆದರಿಕೆಯೇ ಇಲ್ಲ. ನನ್ನ ಬುದ್ಧಿಯು ನಿಶ್ಚಲವಾದುದು. ಆ ಹುಡುಗರಿಗೆ ಮನಸ್ಸು ಚಂಚಲವಾದುದು. ಯುದ್ಧವೆಂದರಂತೂ ಅವರಿಗೆ ದೊಡ್ಡ ಹಬ್ಬವೇ ಅಲ್ಲವೇ? ಅದರಿಂದ ಭುಜಗಳನ್ನು ತಟ್ಟಿಕೊಂಡು ಮುಂದೆ ಬೀಳುವುದರ ಮೂಲಕ ತಮ್ಮ ಸ್ವರೂಪವನು ಎಲ್ಲಿಯಾದರೂ ಪ್ರಕಾಶಗೊಳಿಸುವರೋ ಏನೋ? ಇನ್ನರಿಂದ ಮತ್ತಾವ ಅನರ್ಥವು ಸಂಭವಿಸುವುದೋ?—ಎಂದು ಭಯವೇ ಹೊರತು ನನಗೆ ಮತ್ತೆ ಯಾವ ವಿಧದಲ್ಲಿಯೂ ಅಂಜಿಕೆಯೇ ಇಲ್ಲ.

ವಿರಾಟ—(ಬಳಸಾರ್ದು ಕೈಮುಗಿದು) ಭಗವನ್! ದಯಮಾಡಿಸಬೇಕು. ನಮಸ್ಕರಿಸುವೆನು.

ಭಗವಂತ—ನಿನಗೆ ಮಂಗಳವಾಗಲಿ.

ವಿರಾಟ—ಪೂಜ್ಯನೇ! ಆಸನವನ್ನು ಅಲಂಕರಿಸಬಹುದಲ್ಲವೇ?

ಭಗವಂತ—ಒಳ್ಳೆಯದು. (ಕುಳಿತು) ಅಯ್ಯಾ ಅರಸನೇ! ಪ್ರಕೃತ ಕಾಲದಲ್ಲಿ ಈ ಉದ್ಯೋಗಕ್ಕೆ ಕಾರಣವೇನು? ನಿನ್ನ ರಾಜ್ಯಲಕ್ಷ್ಮಿಯು ಏನೋ ಯೋಚನೆಗೆ ಸಿಕ್ಕಿದವಳಂತೆ ಸಂತೋಷವಿಲ್ಲದಿರುವಳಲ್ಲಾ! ಕೊಬ್ಬಿದ ಮಲ್ಲರೂ ಕೂಡ ಯೋಚಿಸುತ್ತಿರಲು

ಕಾರಣವೇನು ? ಆದರೆ, ಹೆದರಬೇಡ. ಈ ಪೀಡೆಯು ಸುಲಭ ವಾಗಿ ತೊಲಗುವುದು. ನೀನು ಬೇಗನೆ ಸಂತಸಗೊಳ್ಳುವೆ.

ವಿರಾಟ—ಭಗವನ್ ! ಗೋಗ್ರಹಣದ ಸಲುವಾಗಿ ನಾಚುವೆನು.

ಭಗವಂತ—ಯಾರು ? ಯಾವಕಾರಣದಿಂದ ?

ವಿರಾಟ—ಧೃತರಾಷ್ಟ್ರನ ಮಕ್ಕಳು. ಮತ್ತಾರು ?

ಭಗವಂತ—(ಆತ್ಮಗತಂ) ಅಯ್ಯೋ ! ಕಷ್ಟವು. ಲೋಕದಲ್ಲಿ ಒಂದೇ ಮನೆತನದಲ್ಲಿ ಜನಿಸಿದಮಾತ್ರದಿಂದಲೇ ಮನಸ್ಸಿಗಳ ಅಂತರಂಗವು ತತ್ತರಗೊಳ್ಳುವುದು. ಜಗಳಕ್ಕೆ ಕಾಲುಕೆರೆದು ನಿಂತಿರುವ ಅವರು ಅಪರಾಧ ಮಾಡಿದುದರಿಂದ ನಾನೇ ಮಾಡಬಾರದ ತಪ್ಪನ್ನು ಮಾಡಿ ರುವೆನೋ ಎಂಬಂತೆ ನನ್ನ ಚಿತ್ತವೃತ್ತಿಯು ಲಜ್ಜಾಸಮುದ್ರದಲ್ಲಿ ಮುಳುಗಿ ಮರುಗುತ್ತಿರುವುದು.

ವಿರಾಟ—ಭಗವಂತನೆ ! ಇದೇನು ? ಯೋಚನೆಯಲ್ಲಿ ಕುಳಿತಿರಿ ?

ಭಗವಂತ—ಏನೂ ಇಲ್ಲ. ಅವರ ಕೆಚ್ಚನ್ನು ಕುರಿತು. ಅಷ್ಟೇ.

ವಿರಾಟ—ಆಗಲಿ. ಇನ್ನು ಮೇಲೆ ವಿಧವೆಯರಂತೆ ಗೋಪ್ಯವಾಗಿ ಸಂಚ ರಿಸುವಹಾಗೆ ಮಾಡುವೆನು. "ವಿರಾಟನೆಂದರೆ ಯಾರು" ಎಂಬ ಸಂಗತಿಯನ್ನು ಅವರಿನ್ನೂ ಚೆನ್ನಾಗಿ ಅರಿಯರು. ನಾನೇನು ಯುಧಿಷ್ಠಿರನೆಂದು ತಿಳಿದರೋ ಏನೋ ? ಆತನಾದರೆ ಸ್ವತಃ ಶಕ್ತನಾಗಿದ್ದರೂ ಚಿತ್ತವೃತ್ತಿಯನ್ನು ಬಿಗಿಹಿಡಿದು ಕ್ರೋಧವನ್ನು ಅಣಗಿಸಿ, ಅನುಜರನ್ನೂ ಅಡ್ಡಗಿಸಿದನು. ನನ್ನಹತ್ತಿರ ಇದೆಲ್ಲಾ ನಡೆಯಲಾರದು. ಅವರ ಸೊಲ್ಲನ್ನೇ ಅಣಗಿಸುವೆನು.

ಭಗವಂತ—ಆಹಾ ! ಅದಕ್ಕೇನು ? (ಆತ್ಮಗತಂ)

ನನ್ನ ಕ್ಷಮಾಗುಣವು ಇಷ್ಟರಮಟ್ಟಿನ ಪ್ರಾಶಸ್ತ್ಯವನ್ನು ಹೊಂದಿ ರುವುದರಿಂದ, ಇಂದಿಗೆ ನನ್ನ ಕಷ್ಟವು ಫಲಿತವಾದುದೆಂದು ತಿಳಿಯು ವೆನು. ನೆಲದಮೇಲೆ ಸೊಪ್ಪುಸದೆಯನ್ನು ಹಾಸಿಕೊಂಡು ಮಲ ಗುವಿಕೆಯೂ, ರಾಜ್ಯವನ್ನು ಹೋಗಲಾಡಿಸಿಕೊಂಡುದೂ, ದ್ರೌಪ ದಿಯ ಮಾನಭಂಗವೂ, ವೇಷವನ್ನು ಬದಲಾಯಿಸಿ ಈರೀತಿ ಗೂಢ ವಾಗಿರುವಿಕೆಯೂ, ನಮ್ಮನ್ನು ಆಶ್ರಯಿಸಿಕೊಂಡಿದ್ದವರನ್ನೇ

ನಾವು ಬತ್ತಾಸೆಮಾಡಿಕೊಂಡಿರುವಿಕೆಯೂ ಇವುಗಳೆಲ್ಲವೂ ಶ್ಲಾಘ್ಯ ವಾದುವೆಂದು ತಿಳಿಯುವೆನು.

ಭಟ—(ಪ್ರವೇಶಿಸಿ) ಮಹಾರಾಜನೆ! ಜಯಶೀಲನಾಗು.

ವಿರಾಟ—ಏನು? ದುರ್ಯೋಧನನ ವ್ಯವಸಾಯವು ಯಾವರೀತಿ ಇರುವುದು?

ಭಟ—ಜೀಯಾ; ಲಾಲಿಸು. ದುರ್ಯೋಧನನೊಬ್ಬನೇ ಅಲ್ಲ. ಭೂಮಂ ಡಲದ ಅರಸರೆಲ್ಲರೂ ಬಂದಿರುವರು.

ದ್ರೋಣ, ಭೀಷ್ಮ, ಜಯದ್ರಥ, ಶಲ್ಯ, ಅಂಗರಾಜನಾದ ಕರ್ಣ, ಶಕುನಿ, ಕೃಪ ಮುಂತಾದವರೂ ಬಂದು ಸೇರಿರುವರು. ಅವರ ರಥಗಳ ತುದಿಯಲ್ಲಿ ಅಲ್ಲಾಡುತಿರುವ ಧ್ವಜಪಟಗಳನ್ನು ಲೆಕ್ಕಿಸಲಾ ರದೆ ನೋಡಿದಮಾತ್ರದಿಂದಲೇ ನಮ್ಮ ಗುಂಡಿಗೆಯು ಒಡೆದಿರು ವುದು. ಇನ್ನು ಬಾಣಗಳನ್ನೇನೂ ಅವರು ಬಿಡಬೇಕಾದ ಪ್ರಮೇ ಯವೇ ಇಲ್ಲ.

ವಿರಾಟ—(ಎದ್ದುನಿಂತು ಕೈಜೋಡಿಸಿ ಸಂಭ್ರಮದಿಂದ) ಏನು? ಪೂಜ್ಯ ನಾದ ಗಂಗಾಪುತ್ರನೂ ಬಂದಿರುವನೇ?

ಭಗವಂತ—ಭಲಾ! ಹೆದರಿದ್ದರೂ ಮರ್ಯಾದೆಯನ್ನು ಮರೆತಿಲ್ಲವು. ಇದೀಗ ಮಾನ್ಯರ ಲಕ್ಷಣವು! (ಆತ್ಮಗತಂ) ಕೌರವರ ಗುರುವ ರ್ಯರೆನಿಸಿದ ಭೀಷ್ಮದ್ರೋಣರೂ ಬಂದಿರುವರಂತೆ. ಅವರು ಬರಲು ಕಾರಣವೇನಿರಬಹುದು! ಬಂದುವೇಳೆ "ನಿಮ್ಮ ಪ್ರತಿ ಜ್ಞೆಯು ಅವಧಿಯು ತೀರಿತು. ನೀವಿನ್ನೂ ಗೂಢವಾಗಿರಲು ಕಾರ ಣವೇನು? ಬೇಗನೆ ನಿಮ್ಮ ಮುಂದಣ ಯೋಚನೆಯಲ್ಲಿ ದೃಷ್ಟಿ ಯನ್ನಿರಿಸಿರಿ" ಎಂಬುದಾಗಿ ಜಾಗರೂಕತೆಯನ್ನು ಸೂಚಿಸಲು ಬಂದಿರಬಹುದೆಂದು ತಿಳಿಯುವೆನು.

ವಿರಾಟ—ಯಾರಲ್ಲಿ?

ಭಟ—ಏನಪ್ಪಣೆ?

ವಿರಾಟ—ಸಾರಥಿಯನ್ನು ಇತ್ತ ಬರಹೇಳು.

ಸಾರಥಿ—(ಪ್ರವೇಶಿಸಿ) ಆಯುಷ್ಮಂತನೇ! ಜಯಶೀಲನಾಗು.

ವಿರಾಟ—ಬೇಗನೆ ನನ್ನ ರಥವನ್ನು ಸಿದ್ಧಪಡಿಸು. ಉತ್ತಮೋತ್ತಮನೆನಿಸಿದ ಅತಿಥಿಯು ರಣಸತ್ಕಾರವನ್ನು ಕೈಕೊಳ್ಳಲು ಬಂದಿರುವನು. ಆತನನ್ನು ಗೆಲ್ಲುವುದು ನನ್ನ ಅಭಿಲಾಷೆಯಲ್ಲದಿದ್ದರೂ ನನ್ನ ಬಾಣಸಂಧಾನಚಾತುರ್ಯದಿಂದ ಭೀಷ್ಮನನ್ನು ಮೆಚ್ಚಿಸಬೇಕೆಂದು ಕುತೂಹಲಗೊಂಡಿರುವೆನು.

ಸಾರಥಿ—ಆಯುಷ್ಮಂತನೇ! ಆಗಬಹುದು. ಆದರೆ—

ಶತ್ರುಸೇನೆಯನ್ನು ಭೇದಿಸುವುದರಲ್ಲಿ ನಿನಗೆ ಬಳಕೆಯಾಗಿದ್ದ ರಥವನ್ನು ಹೂಡಿ, ಕುಮಾರನಾದ ಉತ್ತರನು ಹೊರಟಿರುವನು.

ವಿರಾಟ—ಏನು ? ಕುಮಾರನು ಹೊರಟಿರುವನೆಂದು ಹೇಳಿದೆಯಾ ?

ಸಾರಥಿ—ಮತ್ತೇನು ?

ಭಗವಂತ—ರಾಜನೆ! ಅಡ್ಡಗಟ್ಟಿ, ಹೇಗಾದರೂ ಕುಮಾರನನ್ನು ಹಿಂದಕ್ಕೆ ಕರೆತರುವ ಪ್ರಯತ್ನ ಮಾಡು. ತ್ವರೆಮಾಡು. ತ್ವರೆಮಾಡು. ಯುದ್ಧದ ಗುಣದೋಷಗಳನ್ನು ಕುಮಾರನು ಅರಿತವನಲ್ಲ. ಹುಡುಗಾಟಿಕೆಯಿಂದ ಹೊರಟಿರುವನು. ಯುದ್ಧವೆಂದರೇನು? ಕುಮಾರನೆಂದರೇನು ? ಅದರಲ್ಲಿಯೂ ದ್ರೋಣ, ಭೀಷ್ಮ ಕೃಪ ಮುಂತಾದ ಮಹಾರಥಿಕರೊಡನೆಯೇ ಇವನ ಸಾಹಸ? ರಣಾಗ್ನಿಯಹತ್ತಿರ ನಿಂತರೆ ಶಾಕವು ಸೋಕದಿರುವುದು ಅಪೂರ್ವ. ಸುಡಲಾರದೆಂಬುದನ್ನು ಮರೆತುಬಿಡು. ಧೃತರಾಷ್ಟ್ರಕುಮಾರರಾದರೋ ಸಾಮಾನ್ಯರಲ್ಲ. ಅವರು ಯಾರು ಸಿಕ್ಕಿದರೂ ಬಿಡುವವರಲ್ಲ. ನಿನ್ನ ಮಗನನ್ನು ಅಲೆಗಳೆಯುವುದಕ್ಕಾಗಿ ಈರೀತಿ ಹೇಳುವೆನೆಂದು ಭಾವಿಸಬೇಡ.

ವಿರಾಟ—ಹಾಗಾದರೆ, ಬೇಗನೆ ಇನ್ನೊಂದು ರಥವನ್ನು ಸಿದ್ಧಪಡಿಸು.

ಸಾರಥಿ—ಆಯುಷ್ಮಂತನೆ! ಅಪ್ಪಣೆ.

ವಿರಾಟ—ಇರಲಿ. ಇತ್ತಬಾ.

ಸಾರಥಿ—ಆಯುಷ್ಮಂತನೆ! ಇದೋ ಬಂದಿರುವೆನು. ಅಪ್ಪಣೆಯಾಗಬೇಕು.

ವಿರಾಟ—ಕುಮಾರನ ರಥವನ್ನು ನೀನೇ ನಡೆಸಿಕೊಳ್ಳಲು ಹೋಗಲಿಲ್ಲನೇಕೆ?

ಅಥವಾ ಅವನೇನಾದರೂ ನಿನ್ನನ್ನು ಬೇಡವೆಂದು ತಡೆದನೇ? ನಮ್ಮ ಮನೆತನದ ಸಾರಥಿಯು ನೀನೇ ಅಲ್ಲವೇ ?

ಸಾರಥಿ—ಆಯುಷ್ಮಂತನೇ ! ಪ್ರಸನ್ನನಾಗು. ರಥವನ್ನು ಸಜ್ಜುಗೊಳಿಸಿ, ಸಾರಥಿಯು ನಡವಳಿಕೆಗೆ ತಕ್ಕಂತೆ ನಾನು ರಥದ ಹತ್ತಿರದಲ್ಲಿಯೇ ನಿಂತಿದ್ದೆನು. ಆಗ ಕುಮಾರನು—

ಪರಿಹಾಸಕ್ಕಾಗಿಯೋ, ಇಲ್ಲವೇ ದಿಟವಾಗಿಯೂ ಅವಳ ಕೌಶಲವನ್ನು ಅರಿತೋ, ಅದೇನೋ ನಾನರಿಯೆನು. ನನ್ನನ್ನು ಹಿಂದೆ ಉಳಿಯಹೇಳಿ ನನ್ನ ಸ್ಥಾನದಲ್ಲಿ ಬೃಹನ್ನಳೆಯನ್ನು ಕೂಡಿಸಿದನು.

ಭಗವಂತ—ರಾಜನೆ ; ರಾಜನೆ ! ಸಾಕು. ಸಾಕು. ಇನ್ನು ಧೈರ್ಯವಾಗಿರು.

ರಥದ ಗಾಲಿಗಳ ತಿರುಗುವಿಕೆಯಿಂದ ಹೊರಟ ಧೂಳಿಯು ಸೂರ್ಯನನ್ನು ಮರೆಮಾಡುವಂತೆ ವೇಗವಾಗಿ ರಥವನ್ನು ನಡೆಯಿಸುವುದರಲ್ಲಿ ಮಹಾ ಚತುರೆಯಾದ ಬೃಹನ್ನಳೆಯು ಸಾರಥಿಯಾಗಿರುವುದಕ್ಕೆ ಸಮ್ಮತಿಸಿದುದೇ ದೊಡ್ಡ ಭಾಗ್ಯವೆಂದು ತಿಳಿ. ಅವಳು * ಕೃಷ್ಣ ಸಾರಥಿಯಾಗಿದ್ದವಳಲ್ಲವೇ ? ಎಂದಮೇಲೆ ಬಿಲ್ಲುಬಾಣಗಳೊಂದೂ ಇಲ್ಲದಿದ್ದರೂ ರಥದ ಗಾಲಿಗಳ ಶಬ್ದದಿಂದಲೇ ಕುಮಾರನು ಹಗೆಪಡೆಯನ್ನೆಲ್ಲಾ ನಿಮಿಷಮಾತ್ರದಲ್ಲಿ ಗೆದ್ದು ಜಯಲಕ್ಷ್ಮಿಯೊಡಗೂಡಿ ಬಂದನೆಂದು ತಿಳಿ.

ವಿರಾಟ—ಹಾಗಾದರೆ ಹೋಗು. ಬೇಗನೆ ಇನ್ನೊಂದು ರಥವನ್ನು ಸಿದ್ಧಪಡಿಸು.

ಸಾರಥಿ—ಆಯುಷ್ಮಂತನೆ ! ಅಪ್ಪಣೆ. (ಹೊರಟುಹೋಗುವನು.)

ಭಟ—(ಪ್ರವೇಶಿಸಿ) ಕುಮಾರನ ರಥವು ಮುರಿದುಬಿದ್ದಿತಂತೆ.

ವಿರಾಟ—ಏನು ? ಏನು ? ಮುರಿದು ಹೋಯಿತೇ ?

ಭಗವಂತ—ಈಗ ಮುರಿಯುವುದೆಂದರೇನು ? ಸುಳ್ಳು. (ಆತ್ಮಗತಂ) ವತ್ಸನಾದ ಅರ್ಜುನನು ತನ್ನ ದಿವ್ಯರಥವನ್ನು ಸಂಪಾದಿಸಲು ಈ ಉಪಾಯುವನ್ನು ಮಾಡಿರಬಹುದು.

* ಕೃಷ್ಣನೇ ಸಾರಥಿಯಾಗಿ ಉಳ್ಳವ. ಅರ್ಜುನ ; ಅಥವಾ ಕೃಷ್ಣನಸಾರಥಿಯಾದವಳು.

ಭಟ—ಜೀಯಾ! ಅವಧರಿಸು.

ಯುದ್ಧ ವಿಶಾರದರಾದ ನೂರಾರುಮಂದಿ ಯೋಧರು ಕಿಕ್ಕಿರಿಸು ತಿರುವಲ್ಲಿ ಒಳಹುಗಲು ದಾರಿಯೇ ಇರಲಿಲ್ಲ. ಇಂತಿರಲು ಹೇಗೋ ಸಂಚು ಮಾಡಿಕೊಂಡು ಎರಡು ರಥಗಳ ನಡುವೆ ಹೋಗತಕ್ಕ ಕಾಲದಲ್ಲಿ ಸ್ಮಶಾನದಹತ್ತಿರ ರಥವು ಮುರಿಯಿತಂತೆ.

ಭಗವಂತ—(ಆತ್ಮಗತಂ) ಆಹಾ! ಸರಿ. ಅಲ್ಲಿಯೇ ಅಲ್ಲವೇ ಗಾಂಡೀವ ವನ್ನು ಇರಿಸಿದ್ದುದು? (ಪ್ರಕಾಶಂ) ರಾಜನೆ!

ಸ್ಮಶಾನದ ಹತ್ತಿರ ಹೋಗುವವೇಳೆಗೆ ಸರಿಯಾಗಿ ರಥವು ಮುರಿದು ನಮಗೆ ಅಪಶಕುನವೆಂದು ತೋರಿದರೂ ಅದು ದಿಟವಾಗಿಯೂ ನಮಗೆ ಒಳ್ಳೆಯದನ್ನೇ ಸೂಚಿಸುವುದು. ಕೌರವಸೇನೆಯು ನಿಂತಿರುವ ಪ್ರದೇಶವು ಸ್ಮಶಾನವಾಗುವುದೆನ್ನಲು ಸಂದೇಹವಿಲ್ಲ. ನೀನು ಧೈರ್ಯವಾಗಿರು.

ವಿರಾಟ—ಭಗವನ್! ಯಾವುದಕ್ಕೆ ಏನು ಸಂಬಂಧ? ಉಚಿತವರಿತು ಮಾತನಾಡಬೇಕು. ಅಕಾಲದಲ್ಲಿ ಇಂತಹ ಮಾತನ್ನಾಡಿದರೆ ನನಗೆ ಸಿಟ್ಟು ಮಂಡೆಯಮೇಲೆ ಕೂಡುವುದು.

ಭಗವಂತ—ಸಿಟ್ಟುಗೊಳ್ಳದಿರು. ನೋಡು. ಸಾಸಿದುವರೆಗೆ ಯಾವಾಗ ಲಾದರೂ ನಿನ್ನ ಬಳಿ ಸುಳ್ಳು ಮಾತನ್ನು ಹೇಳಿರುವೆನೇ?

ವಿರಾಟ—ಆ! ಹೌದು. ದಿಟ. ಇನೊಂದು ಭರವಸೆಯುಂಟು. ಇರಲಿ. ಮುಂದಣ ಸಮಾಚಾರವನ್ನು ತಿಳಿದುಹೇಳು. ಹೋಗು.

ಭಟ—ಮಹಾರಾಜನೆ! ಅಪ್ಪಣೆ (ಎಂದು ತೆರಳುವನು.)

ವಿರಾಟ—ಇದೇನು? ಇದ್ದಕ್ಕಿದ್ದ ಹಾಗೆಯೇ ದಡವಿಾರಿ ಹರಿಯುವ ಹೊಳೆ ಯಂತೆ ಭೂಮಿಯನ್ನೆಲ್ಲಾ ನಡುಗಿಸುವ ಭಯಂಕರವಾದ ಶಬ್ದವು ಕೇಳಬರುವುದು! ಇದೇನೋ ತಿಳಿಯನಲ್ಲಾ!

ಭಟ—(ಪ್ರವೇಶಿಸಿ) ಮಹಾರಾಜನೆ! ಶ್ಮಶಾನದ ಹತ್ತಿರ ಬಂದು ಮುಹೂ ರ್ತದವರೆಗೆ ಕುದುರೆಗಳನ್ನು ನಿಲ್ಲಿಸಿ ದಣುವಾರಿದ ಕೂಡಲೇ—

ಭಗವಂತ—(ಆತ್ಮಗತಂ) ಸದ್ಯಕ್ಕೆ ದೇವರ ದಯೆಯಿಂದ ಇವನು ನನ್ನ ನ್ನು ಸುಳ್ಳುಗಾರನನ್ನು ಮಾಡದಿರಬೇಕು.

ವಿರಾಟ—ಕುಮಾರನೇನು ಮಾಡಿದನು ? ಬೇಗನೆ ಹೇಳು.

ಭಟ—ಜೀಯಾ ! ಲಾಲಿಸು. ಕರ್ಪೂರದ ಆನೆಗಳೆಲ್ಲವೂ ಬಾಣತಾಪದಿಂದ ಕಪಿಲವರ್ಣವಾಗಿರುವುವು. ಕುದುರೆಯಾಗಲಿ, ರಾವುತನಾಗಲಿ, ಮಾವುತನಾಗಲಿ, ಯುದ್ಧವೀರನಾಗಲಿ ನೂರಾರು ಬಾಣಗಳ ಪೆಟ್ಟನ್ನು ತಿನ್ನದವರೇ ಇಲ್ಲ. ಕುದುರೆಗಳು ಎಲ್ಲಿದ್ದವು ಅಲ್ಲಲ್ಲಿಯೇ ನಿಂತಿರುವುವು. ರಥಗಳು ಬಾಣಗಳಿಂದ ಅಲಂಕೃತವಾಗಿರುವುವು. ಶರಸಂಪಾತದಿಂದ ದಾರಿಯು ಮುಚ್ಚಿಹೋಗಿರುವುದು. ಬಿಲ್ಲು ಭಯಂಕರವಾದ ಬಾಣದ ಹೊಳೆಯನ್ನು ಹರಿಯಿಸುತ್ತಿರುವುದು.

ಭಗವಂತ—(ಆತ್ಮಗತಂ) ದೇವೇಂದ್ರನ ಖಾಂಡವ ವನವನ್ನು ಅಗ್ನಿಪುರುಷನು ಸುಟ್ಟಕಾಲದಲ್ಲಿ ಅನುಗ್ರಹಿಸಿದ ವರವು ಇದೇ ಅಲ್ಲವೇ ? ಆಗ ಎಷ್ಟು ಮಳೆಯ ಹನಿಗಳು ಬಿದ್ದುವೋ ಅವೆಲ್ಲವೂ ಅಷ್ಟು ಬಾಣಗಳಾಗಿರುವಂತೆಯಲ್ಲವೇ ಭಗವಂತನಾದ ಅಗ್ನಿದೇವನ ವರವು! ಇದೆಲ್ಲವೂ ಅಕ್ಷಯ ತೂಣೀರದ ಮಹಿಮೆ.

ವಿರಾಟ—ಹಗೆಯವರ ಕಡೆ ಈಗ ಸಮಾಚಾರವೇನು ?

ಭಟ—ಅದು ನನಗೆ ಪ್ರತ್ಯಕ್ಷವಲ್ಲವಪ್ಪ ? ಆದರೆ ಸಮಾಚಾರವನ್ನು ತಂದವರು ಈರೀತಿ ಹೇಳುವರು.

ಬಿಲ್ಲಿನ ಶಬ್ದವನ್ನು ಕೇಳಿದೊಡನೆಯೇ ದ್ರೋಣನು "ಅದೇ ಇದು" ಎಂದು ಯುದ್ಧಮಾಡದೆ ಹಿಂದಿರುಗಿದನಂತೆ. ಭೀಷ್ಮನ ಧ್ವಜಪಟದಲ್ಲಿ ವೇಗವಾಗಿ ಬಿದ್ದ ಬಾಣವನ್ನು ಕಂಡೊಡನೆಯೇ "ಅಬ್ಬಬ್ಬಾ ! ಸಾಕು, ಸಾಕು" ಎಂದು ಮುಂದೆ ಬೀಳಲಿಲ್ಲವಂತೆ. ಕರ್ಣನು ಸೋತುಹೋಗಿ "ಇದೆಲ್ಲಿಯ ವೀರಸಿಂಹವಪ್ಪಾ !" ಎಂದುಕೊಂಡನಂತೆ. ಮಿಕ್ಕ ಅರಸರೆಲ್ಲರೂ ಹೆದರಿಕೆಯಿಂದ ಒಟಗೂಡಿರುವಲ್ಲಿ ಹುಡುಗನಾದ ಒಬ್ಬ ಅಭಿಮನ್ಯುವು ಮಾತ್ರ ಲಕ್ಷ್ಯವಿಲ್ಲದೆ ಹೋರಾಡುತ್ತಿರುವನಂತೆ.

ಭಗವಂತ—ಏನು ? ಅಭಿಮನ್ಯುವೂ ಬಂದಿರುವನೇ ? ರಾಜನೇ ! ಯಾದವಪಾಂಡವ ವಂಶಗಳ ತೇಜಃಪುಂಜನೆನಿಸಿದ ಸುಭದ್ರಾತನಯನು ಯುದ್ಧಮಾಡುವನಾದರೆ ಮತ್ತೊಬ್ಬ ಸಾರಥಿಯನ್ನು

ಕಳುಹಿಸು. ಬೇಗನೆ ಕಳುಹಿಸು. ಬೃಹನ್ನಳೆಯು ಆಯಾಸಗೊಂಡಿರುವಳೆಂದು ತಿಳಿಯುವೆನು. ಅಭಿಮನ್ಯುವಿನೊಡನೆ ಕುಮಾರನು ಹೋರಾಡುವ ಕಾಲದಲ್ಲಿ ಬೃಹನ್ನಳೆಯು ಸಾರಥ್ಯವು ಸಾಲದು. ಅದರಿಂದ ಸ್ವಲ್ಪ ವಿಶ್ರಾಂತಿಕೊಡುವುದು ಒಳ್ಳೆಯದು.

ವಿರಾಟ—ಬೇಡ. ಬೇಡ. ಏನೂ ಭಯವಿಲ್ಲ.

ಪರಶುರಾಮನ ಬಾಣವೇಗಕ್ಕೂ ಹೆದರದಿದ್ದ ಭೀಷ್ಮನನ್ನೂ, ಸಕಲ ಮಂತ್ರಗಳನ್ನೂ ಬಲ್ಲ ದಿವ್ಯಾಸ್ತ್ರಸಂಪನ್ನನಾದ ದ್ರೋಣನನ್ನೂ, ಕರ್ಣ, ಜಯದ್ರಥ, ಕೃಪ ಮುಂತಾದವರನ್ನೆಲ್ಲಾ ವಿಮುಖರನ್ನಾಗಿಸಿ, ಮಿಕ್ಕ ಆ ಆ ಅರಸರನ್ನೆಲ್ಲಾ ಹಿಂದಟ್ಟಿದ ಕುಮಾರನಿಗೆ ಇದೊಂದು ಅತಿಶಯವೇ ? ಸೌಭದ್ರನನ್ನು ತನ್ನ ಬಾಣವೇಗದಿಂದ ಮರುಳಾಗಿಸಲಾರನೇ ? ನನ್ನ ಭಯವಾದರೂ ಅವನಿಗಿಲ್ಲವೇ? ಗೌರವದಮೇಲಾದರೂ ದೃಷ್ಟಿಯುಪ್ಪರಿಸಲಾರನೇ ? ಒಂದು ವೇಳೆ ಅವನ ಕೈಯೇ ಬಲವಾದರೂ ಭಯವಿಲ್ಲ. ಇಬ್ಬರೂ ಸಮಾನವಯಸ್ಕರಾದುದರಿಂದ ಅವರ ಪ್ರಾಯವೇ ಅವರನ್ನು ರಕ್ಷಿಸುವುದು.

ಭಟ—ನಮ್ಮ ಕುಮಾರನ ರಥವು—

ಬಿಗಿಹಿಡಿದಷ್ಟೂ ಹಿಂದಕ್ಕೂ ಮುಂದಕ್ಕೂ ಜಗ್ಗುವುದು. ಸಡಿಲಬಿಟ್ಟರೆ ಸಾಕು, ವಾಯುವೇಗದಿಂದ ಓಡುವುದು. ತಾನಾಗಿ ಮುಂದೆಬಿದ್ದು ಒಬ್ಬರನ್ನೂ ಜಗ್ಗಿಸುವುದಿಲ್ಲ. ಹಗೆಯು ಕೈಗೆ ದೊರೆತಿದ್ದರೂ ಅಪಕಾರಮಾಡುವುದಕ್ಕೆ ಸಮ್ಮತಿಸದು. ಅಲ್ಲಲ್ಲಿಯೇ ಸುತ್ತಮುತ್ತಲೂ ಸುಳಿದಾಡುತ್ತಾ, ಯೋಗ್ಯನಾದವನಿಗೆ ಉಪದೇಶ ಮಾಡಿದ ಮಹಾಮಂತ್ರದಂತೆ ಗೂಢವಾಗಿ ತನ್ನ ಕಾರ್ಯವನ್ನು ನಡೆಯಿಸುತ್ತಿರುವುದು.

ವಿರಾಟ—ಹೋಗು, ಮುಂದಿನ ಸಮಾಚಾರವನ್ನೂ ಚೆನ್ನಾಗಿ ತಿಳಿದುಬಾ.

ಭಟ—ಮಹಾರಾಜನೆ ! ಅಪ್ಪಣೆ. (ಹೊರಬಂದು ಮರಳಿ ಹೊಕ್ಕು)

ಮಹಾರಾಜನಿಗೆ ಮಂಗಳವಾಗಲಿ ! ವಿರಾಟೇಶ್ವರನು ಸರ್ವೋತ್ಕೃಷ್ಟನಾಗಿರಲಿ ! ಮಹಾರಾಜನೆ, ಪ್ರಿಯವಾರ್ತೆಯನ್ನು ಅರಿಕೆಮಾಡುವೆನು. ಕಾಳಗ. ಗೋಗ್ರಹಣವು ಮುಗಿಯಿತು. ಧಾತ

ರಾಷ್ಟ್ರರೆಲ್ಲರೂ ಹಿಂದಿರುಗಿ ಓಡಿಹೋದರು. ಜಯಲಕ್ಷ್ಮಿಯು ಕುಮಾರನನ್ನು ಒಲಿದು ಬಂದಿರುವಳು.

ಭಗವಂತ—ರಾಜನೆ! ದೈವಾನುಗ್ರಹದಿಂದ ನಿನಗೆ ಅಭ್ಯುದಯವು ಲಭಿಸಿರುವುದು.

ವಿರಾಟ—ಅಲ್ಲ. ಹಾಗೆ ಅಪ್ಪಣೆ ಕೊಡಿಸಬಾರದು. ಶಿವಶಿವಾ! ಹಾಗೆ ಎಂದಿಗೂ ಹೇಳಬಾರದೆಂದು ಬೇಡುವೆನು. ಇದೆಲ್ಲವೂ ತಮ್ಮ ಅನುಗ್ರಹವಿಶೇಷದ ಮಹಿಮೆಯಲ್ಲವೇ? (ದೂತನನ್ನು ನೋಡಿ) ಹಾಗಾದರೆ ಕುಮಾರನೆಲ್ಲಿ?

ಭಟ ರಣರಂಗದಲ್ಲಿ ಸಾಹಸವನ್ನು ತೋರಿದ ನಮ್ಮ ಕಡೆಯ ವೀರಭಟರ ವಿಷಯವನ್ನು ಪಟ್ಟಿಕೆಯಲ್ಲಿ ಗುರುತಿಸುತ್ತಿರುವನು.

ವಿರಾಟ—ಭಲಾ! ಕುಮಾರನ ವ್ಯಾಪಾರವು ಶ್ಲಾಘನೀಯವಾಗಿರುವುದು. ರಣರಂಗದಲ್ಲಿ ಶ್ಲಾಘ್ಯವಾದ ರೀತಿಯಿಂದ ಹಗೆಯೊಡನೆ ಹೋರಾಡಿದವರ ಪಟ್ಟಿಯಿಂದ ಯೋಧರಿಗೆ ಅವರವರ ತಾರತಮ್ಯಾನುಸಾರ ಕಾಲಾಂತರದಲ್ಲಿಯಾದರೂ ಉಚಿತರೀತಿಯಿಂದ ಮರ್ಯಾದೆಮಾಡುವುದರ ಮೂಲಕ ಅವರ ಬಾಧೆಯು ಮರೆತುಹೋಗುವುದಲ್ಲದೆ ನಮ್ಮ ಕಾರ್ಯಗಳಲ್ಲಿ ಯೋಧರು ಮತ್ತಷ್ಟು ಅಕ್ಕರೆಯುಳ್ಳವರಾಗುವರು. ಹಾಗಾದರೆ ಈಗ ಬೃಹನ್ನಳೆಯೆಲ್ಲಿ?

ಭಟ—ಪ್ರಿಯವಾರ್ತೆಯನ್ನು ಅರುಹಲು ಅಂತಃಪುರವನ್ನು ಹೊಕ್ಕಿರುವಳು.

ವಿರಾಟ—ಆ ಬೃಹನ್ನಳೆಯನ್ನು ಇತ್ತ ಬರಹೇಳು.

ಭಟ—ಅಪ್ಪಣೆ. (ಎಂದು ತೆರಳುವನು.)

ಬೃಹ—(ಪ್ರವೇಶಿಸಿ, ತನ್ನ ಉಡುಪನ್ನೂ ಸಾಹಸವನ್ನೂ ನೋಡಿ ಯೋಚಿಸುತ್ತಾ) ಗಾಂಡೀವ ಧನುಸ್ಸಿಗೆ ನಾರಿಯನ್ನು ಬಿಗಿದು ಬಂದು ಗಳಿಗೆಯುಕಾಲ ಸ್ವಪ್ನನಂತೆ ದಿಕ್ಕುತೋರದೆ ಸುಮ್ಮನಿದ್ದೆನು. ಬಳಿಕ ಬಾಣಪ್ರಯೋಗಕಾಲದಲ್ಲಿ ಮುಷ್ಟಿಯನ್ನು ಮರೆಮಾಡಿ ಬಚ್ಚಿಡಲು ಸಾಧ್ಯವಾಗದೆ ಹೋಯಿತು. ಮುಂದಿನಂತೆ ಧನುಷ್ಟಂಕಾರ ಧ್ವನಿ ಹಗೆಗಳನ್ನು ಬೆಗಡಾಗಿಸುವಂತಹ ಕೈಚಳಕವನ್ನು ತೋರ

ಲಿಲ್ಲ. ಸೌಂದರ್ಯವೂ ಪ್ರಕಾಶವಾಗಲಿಲ್ಲವು. ನನ್ನ ಸ್ತ್ರೀವೇಷವು ನನಗೆ ಮಹೋಪಕಾರವನ್ನೇ ರಚಿಸಿತಲ್ಲವೇ ? ನನ್ನ ಅಭಿಮಾನ ವನ್ನೇ ನಾನು ಮರೆತಿದ್ದೆನು. ಯುದ್ಧವೆಲ್ಲವೂ ಮುಗಿದ ಬಳಿಕ ಆಗ ನಾನಾರೆಂಬುದು ನೆನಪಿಗೆ ಬಂದಿತು.

ಛೀ ! ಛೀ ! ಹೇಯವಾದ ಹೆಣ್ಣಿನ ವೇಷದಿಂದಲೇ ನೂರಾರು ಮಂದಿ ಅರಸರ ನಡುವೆ ನಾಚಿಕೆಗೊಂಡು ಬಿಲ್ಲನ್ನು ಸೆಳೆದನಲ್ಲಾ ! ಆದರೆ ಒಂದು ತೃಪ್ತಿಯು. ಬಾಣದ ಮಳೆಯು ವೇಗವಾಗಿ ಸುರಿಯುತಿತ್ತು. ಎಲ್ಲೆಲ್ಲಿಯೂ ಧೂಳಿಯು ಮುಚ್ಚಿ ಕವಿದು ಕೊಂಡಿದ್ದ ಕಾರಣ ನನ್ನನ್ನು ಪ್ರಾಯಿಕವಾಗಿ ಯಾರೂ ಗುರುತಿಸಿ ರಲಾರರೆಂದು ತಿಳಿಯುವೆನು.

ಆದರೆ ಒಂದು. ಗುರುವರ್ಯರಾದ ಪಿತಾಮಹ, ದ್ರೋಣರು ನನ್ನ ಹತ್ತಿರ ಬರಲೇ ಇಲ್ಲ. ಇದಿರಿಸುವುದಕ್ಕಾಗಿ ಸ್ವಲ್ಪ ಮುಂದುವ ರಿದು ಧನುಷ್ಟಂಕಾರವನ್ನು ಕೇಳಿದೊಡನೆಯೇ ಹಿಂದಿರುಗಿದರ ಲ್ಲವೇ ? ಅದರಿಂದ ಅವರಿಗೆ ನನ್ನ ಸಮಾಚಾರವು ತಿಳಿದಿರಬಹುದು. ಹುಂ ! ತಿಳಿದರೂ ತಿಳಿಯಲಿ. ಅವರು ನಮ್ಮ ಹಿತೈಷಿಗಳಾದುದ ರಿಂದ ಬಾಧಕವಿಲ್ಲ.

ಅಯ್ಯೋ !

ಹಗೆಗಳನ್ನು ಹಿಂದಟ್ಟಿ, ಭೂಮಿಯನ್ನು ಗೆದ್ದು, ಗೋವುಗಳನ್ನು ಬಿಡಿಸಿ, ರಾಜನಿಗೆ ಜಯವನ್ನು ಒದವಿಸಿ ಬಂದಿರುವೆನಾದರೂ ನನಗೆ ಇದರ ವಿಷಯವಾಗಿ ತೃಪ್ತಿಯೇ ಇಲ್ಲ. ಹೇಳುವುದಕ್ಕೆ ನನಗೇ ನಾಚಿಕೆಯಾಗುವುದು.

ಕೈಗೆ ಸಿಕ್ಕಿದ್ದ ದುಶ್ಶಾಸನನನ್ನು ಅನ್ಯಾಯವಾಗಿ ಬಿಟ್ಟುಬಿಟ್ಟೆನಲ್ಲಾ ! ಅವನ ತಲೆಯಮೇಲೆ ಎಡಗಾಲನ್ನು ಮೆಟ್ಟಿ ಹಿಂಗಟ್ಟು ಮುಂಗಟ್ಟು ಗಳಿಂದ ಬಿಗಿಸಿ ರಥದಮುಂದೆ ಕೂಡಿಸಿ ಡಂಗುರಹುಯಿಸುತ್ತ ವಿರಾಟರಾಜಧಾನಿಗೆ ಕರೆತರಬೇಕಾಗಿದ್ದಿತಲ್ಲವೇ ? ಛೀ, ಛೀ !! ನನ್ನಬುದ್ಧಿಯೂ ಮೋಸಹೋಯಿತಲ್ಲಾ ! ಉಂ, ಇನ್ನು ಮಾತ ನಾಡಿ ಫಲವಿಲ್ಲ.

ವತ್ಸೆಯಾದ ಉತ್ತರೆಯು ಕೊಟ್ಟ ಆಭರಣಗಳನ್ನು ತೊಟ್ಟು ಈ ಹೆಣ್ಣುವೇಷದಿಂದ ವಿರಾಟರಾಜನನ್ನು ನೋಡಲು ನಾಚುವೆನು. ಆದರೆ ಆತನಾಗಿಯೇ ಹೇಳಿಕಳುಹಿಸಿರುವಕಾರಣ ಹೋಗದಿರುವುದು ಯುಕ್ತವಲ್ಲ. ಆಗಲಿ, ಹೋಗಿ ನೋಡಿಬರುವೆನು. (ಎಂದು ಮುಂದುವರಿದು) ಅಗೋ! ಆರ್ಯನಾದ ಯುಧಿಷ್ಠಿರನೂ ರಾಜನೊಂದಿಗೆ ಕುಳಿತಿರುವನು.

ಯುವಕನಾದರೂ ಅತ್ಯುತ್ತಮವಾದ ತಪೋವನದಲ್ಲಿ ಆಸಕ್ತಿಯನ್ನಿರಿಸಿ, ಕ್ಷತ್ರಿಯಕುಲಾವತಂಸನೆನಿಸಿದ ಸಾರ್ವಭೌಮನಾದರೂ ಬ್ರಾಹ್ಮಣವೃತ್ತಿಯನ್ನು ಅವಲಂಬಿಸಿರುವನು. ರಾಜ್ಯಾಧಿಕಾರಹೀನನಾಗಿದ್ದರೂ ಈತನ ಸಂಪದವು ಮತ್ತಾರಿಗಾದರೂ ಇರುವುದೇ? ತ್ರಿದಂಡಧಾರಿಯಾದ ಸನ್ಯಾಸಿಯಾಗಿರುವನಲ್ಲದೆ ದಂಡಧಾರಿಯೂ ಚಂಡಶಾಸನನೂ ಆದ ರಾಜನಲ್ಲ.

(ಬಳಿಸಾರ್ದು) ಭಗವಂತನೇ! ವಂದಿಸುವೆನು.

ಭಗವಂತ—ನಿನಗೆ ಮಂಗಳವಾಗಲಿ.

ಬೃಹನ್ನಳೆ—ಮಹಾರಾಜನೆ! ನಮಸ್ಕಾರವು.

ವಿರಾಟ—(ಬೃಹನ್ನಳೆಯನ್ನು ನೋಡಿ ಆತ್ಮಗತಂ) ಲೋಕದಲ್ಲಿ ಸಾಹಸವೇ ಪ್ರಧಾನವಾದುದಲ್ಲದೆ ಕುಲವಾಗಲಿ, ಸೌಂದರ್ಯವಾಗಲಿ, ಸ್ತ್ರೀಪುರುಷರೆಂಬ ವ್ಯವಹಾರವಾಗಲಿ, ಉತ್ತಮಕುಲಸಂಭೂತನಾಗಲಿ, ನೀಚಕುಲದಲ್ಲಿ ಹುಟ್ಟಿದವನಾಗಲಿ, ಕರ್ಮವಿಶೇಷದಿಂದ ಪ್ರಾಣಿಯು ಪ್ರಖ್ಯಾತಿಪಡೆಯುವನಲ್ಲದೆ ಬೇರೆಯಲ್ಲ. ಇವಳು ಮೊತ್ತಮೊದಲು ನಮ್ಮ ಬಳಿ ಜೀವಿಕೆಯನ್ನು ಸಂಪಾದಿಸುವುದಕ್ಕೆ ಬಂದಕಾಲದಲ್ಲಿ ನಾನೂ, ನಮ್ಮ ಪರಿವಾರವೂ ಎಲ್ಲರೂ ಬಗೆಬಗೆಯಿಂದ ಪರಿಹಾಸಮಾಡಿ, ಅಲೆಗಳೆದು ಇದ್ದೆವು. ಈಗ ಇವಳೇ ಇಷ್ಟೊಂದು ಬಹುಮಾನಕ್ಕೆ ಪಾತ್ರಳಾಗಿರುವಳೆಂದಮೇಲೆ, ಕುಲರೂಪಗಳನ್ನು ಕಟ್ಟಿಕೊಂಡು ಫಲವೇನು?

(ಪ್ರಕಾಶಂ) ಬೃಹನ್ನಳೆಯೇ! ನೀನು ಅತ್ಯದ್ಭುತವಾದ ಸಾಹಸವನ್ನು ತೋರಿ ಆಯಾಸಗೊಂಡಿರುವೆಯೆಂದು ಬಲ್ಲವನಾದರೂ ಮರಳಿ ನಿನಗೆ

ಆಯಾಸವನ್ನುಂಟುಮಾಡದಿದ್ದರೆ ನನ್ನ ಮನಸ್ಸಿಗೆ ತೃಪ್ತಿಯಿಲ್ಲದಿರುವುದು. ಸಂಗ್ರಾಮಾಂಗಣದ ವಿಚಾರವನ್ನು ಸ್ವಲ್ಪ ಬಿತ್ತರಿಸು.

ಬೃಹ—ಮಹಾರಾಜನೇ ! ಲಾಲಿಸು.

ವಿರಾಟ—ಸಾಹಸವು ಅತ್ಯದ್ಭುತವಾದುದು. ನೀನು ಹೆಂಗಸಿನಂತೆ ಹೇಳಿದರೆ ಸಾಲದು. ರಣರಂಗದಲ್ಲಿ ಪರಾಕ್ರಮವನ್ನು ತೋರಿದಂತೆಯೇ ಈಗಲೂ ಧೈರ್ಯವಾಗಿ ಹೇಳು.

ಬೃಹ—ಜೀಯಾ ! ಅವಧರಿಸು.

ಭಟ—(ಪ್ರವೇಶಿಸಿ) ಮಹಾರಾಜನಿಗೆ ಮಂಗಳವಾಗಲಿ.

ವಿರಾಟ—ಇದೇನು ? ಇಷ್ಟೊಂದು ಆತುರ ? ನಿನ್ನ ಮೋರೆಯು ಯಾವುದೋ ಬಾದು ಅದ್ಭುತವನ್ನು ಸೂಚಿಸುತ್ತಿರುವುದು ! ಅಂತಹ ಆಶ್ಚರ್ಯವಾದರೂ ಯಾವುದು ?

ಭಟ—ನಾನೊಂದು ಪ್ರಿಯವನ್ನು ಅರಿಕೆ ಮಾಡುವೆನು. ಆದರೆ ತಾವು ನಂಬಲಾರಿರಿ. ಆದರೂ ಬಿನ್ನವಿಸುವೆನು. ಸುಭದ್ರಾ ತನಯನಾದ ಅಭಿಮನ್ಯುವು ಕೈಸೆರೆ ಸಿಕ್ಕಿರುವನು.

ಬೃಹನ್ನಳಾ—ಏನು ? ಕೈಸೆರೆ ಸಿಕ್ಕಿದನೇ ? (ಆತ್ಮಗತಂ) ಇವನ ಸೈನ್ಯವನ್ನೆಲ್ಲಾ ನಾನು ಚೆನ್ನಾಗಿ ತೂಕಮಾಡಿ, ಒಬ್ಬೊಬ್ಬರ ಸಾಹಸವನ್ನೂ ಒರೆಯಿಟ್ಟು ನೋಡಿರುವೆನು. ಅಭಿಮನ್ಯುವಿನ ಸಾಹಸವನ್ನೂ ಶೌರ್ಯವನ್ನೂ ರಣರಂಗದಲ್ಲಿ ಕಂಡು ಸಂತುಷ್ಟನಾದೆನು. ಇವನೊಡನೆ ಹೋರಾಡತಕ್ಕವನೊಬ್ಬನಾದರೂ ಕಂಡು ಬರಲಿಲ್ಲವಲ್ಲಾ ! ಬಂಡುವೇಳೆ ಕೀಚಕರಾದರೂ ಜೀವಿಸಿ ಇದ್ದ ಪಕ್ಷದಲ್ಲಿ ಊಹಿಸಿದರೂ ಊಹಿಸಬಹುದಾಗಿದ್ದಿತು. ಅವರೂ ನಾಮಾವಶೇಷಿತರಾಗಿರುವಲ್ಲಿ ಮತ್ತಾರು ಇವನನ್ನು ಹಿಡಿದರೋ ಕಾಣೆನಲ್ಲಾ ! ಅಭಿಮನ್ಯುವೆಂದರೇನು ? ಕೈಸೆರೆ ಸಿಕ್ಕುವುದೆಂದರೇನು ?

ಭಗವಂತ—ಬೃಹನ್ನಳೇ ! ಏನು ? ಇದರ ಸಮಾಚಾರವನ್ನೇನಾದರೂ ಬಲ್ಲೆಯಾ ?

ಬೃಹನ್ನಳೆ—ಅವನನ್ನು ಹಿಡಿಯತಕ್ಕ ಶೂರನನ್ನಾದರೂ ನಾನರಿಯೆನು. ಅವನೇನೂ ಸಾಮಾನ್ಯನಲ್ಲ. ಮಹಾ ಬಲಶಾಲಿಯು. ಅಸ್ತ್ರ

ವಿದ್ಯೆಯಲ್ಲಿ ಚೆನ್ನಾಗಿ ಶಿಕ್ಷಿತನಾದವನು. ಇಷ್ಟರಮೇಲೆ ಸಿಕ್ಕಿರುವುದೇ ನಿಜವಾದರೆ ಅವನ ಪಿತೃವರ್ಗದ ಗಾಳಿಯೇ ಅವನಮೇಲೆಯೂ ಬೀಸಿರಬಹುದು. ಪಿತೃಗಳ ದುರದೃಷ್ಟಕ್ಕೆ ತಕ್ಕಂತೆ ಅವನಿಗೂ ತಿರಸ್ಕಾರವು ದೊರೆತಿರಬಹುದು.

ವಿರಾಟ—ಹಾಗಾದರೆ ಅವನನ್ನು ಹಿಡಿತಂದವರಾರು?

ಭಟ—ರಥವನ್ನು ಧೈರ್ಯವಾಗಿ ತೂರಿ ಕೈಗಳಿಂದಲೇ ಇಳಿಸಿದನು.

ವಿರಾಟ—ಯಾರು?

ಜೀಯಾ, ತಾವು ಅಡಿಗೆಯ ಶಾಲೆಯಲ್ಲಿ ಪ್ರಮುಖವಾಗಿರುವಂತೆ ನೇಮಿಸಿದ ಆ ಮಲ್ಲನು.

ಬೃಹನ್ನಳೆ—(ಮರೆಯಾಗಿ) ಓಹೋ! ಹೀಗೆಯೇ ಸಮಾಚಾರವು? ಆರ್ಯನಾದ ಭೀಮಸೇನನು ಅಕ್ಕರೆಯಿಂದ ತಕ್ಕೈಸುತ್ತಿರುವನು. ಅಷ್ಟೇ. ಅವನನ್ನು ಹಿಡಿತರುವ ಶೂರನಾದರೂ ಯಾರು? ದೂರದಿಂದಲೇ ನಾವು ಅವನನ್ನು ಕಂಡು ಆನಂದಗೊಂಡೆವು. ಉಚಿತರೀತಿಯಲ್ಲಿ ವ್ಯವಹಾರವನ್ನು ನಡೆಯಿಸಿದ ಆರ್ಯನು ನನಗಿಂತಲೂ ಪುತ್ರವಾತ್ಸಲ್ಯಪರಿಪೂರ್ಣನೆಂದು ತಿಳಿಯುವೆನು. ಭಲಾ! ಆರ್ಯನ ನಡವಳಿಕೆಯು ಶ್ಲಾಘ್ಯವಾದುದು.

ವಿರಾಟ—ಹಾಗಾದರೆ ಗೌರವದಿಂದ ಸತ್ಕರಿಸಿ ಅವನನ್ನು ಕರೆದುಕೊಂಡು ಬನ್ನಿರಿ.

ಭಗವಂತ—ಯಾದವಪಾಂಡವ ವಂಶದ ಮೊಳಕೆಯಂತಿರುವ ಅಭಿಮನ್ಯುವನ್ನು ನೀನು ಸತ್ಕರಿಸಿ ಕರೆತಂದಲ್ಲಿ ಹೆದರಿಕೆಯಿಂದ ನೀನೂ ಪೂಜೆ ಮಾಡಿದೆಯೆಂದು ಲೋಕವು ನೆನೆಯುವುದು. ಅದರಿಂದ ಅವನನ್ನು ಜಗ್ಗಿಸಿ, ಹೀಯಾಳಿಸುವುದೇ ಯುಕ್ತವಾದುದು.

ವಿರಾಟ—ಯದುಕುಲ ಶಿಖಾಮಣಿಯಾದ ಶ್ರೀ ಕೃಷ್ಣನ ತಂಗಿಯ ಮಗನನ್ನು ತಿರಸ್ಕರಿಸಬೇಕೆಂದು ಹೇಳುವೆಯಾ! ಚೆನ್ನಾಯಿತು. ನಾನು ಈ ಮಾತನ್ನು ಮಾತ್ರ ಎಂದೆಂದಿಗೂ ಅನುಮೋದಿಸಲಾರೆನು. ಇವನು ಸತ್ಯಸಂಧನಾದ ಯುಧಿಷ್ಠಿರನ ಮಗನು. ಇಷ್ಟರ ಮೇಲೆ ನಮ್ಮ ಕುಮಾರನೊಡನೆ ವಯಸ್ಸಿನಿಂದ ಸಮಾನನು.

ನಮ್ಮ ಪೂರ್ವಿಕರಿಗೂ ದ್ರುಪದರಾಜನಿಗೂ ಹಿಂದಣ ಸಂಬಂಧ ವುಂಟು. ಆದರಿಂದ ಅವನು ಪಾಪೆಯಲ್ಲಿ ನನಗೆ ನಪ್ತ (ಮರಿಮಗ) ನಾಗಬೇಕು. ಇಷ್ಟರಲ್ಲಿಯೇ ನಮಗೆ ಅಳಿಯನಾದರೂ ಆಗಬ ಹುದು. ನಾವು ಹೆಣ್ಣು ಹೆತ್ತವರಾದಕಾರಣ ಎಂದಿಗಾದರೂ ಅವ ನನ್ನು ಜರೆಯಬಹುದೇ? ಇಷ್ಟರಮೇಲೆ ಮಹಾಶೂರನಾದಪ್ರ ಯುಕ್ತ ಪೂಜಾರ್ಹನೆನಿಸಿರುವ ಅತಿಥಿಯೆಂದು ಭಾವಿಸುವೆನು. ಪಾಂಡವರು ನಮ್ಮ ಆಪ್ತವರ್ಗದವರಲ್ಲವೇ?

ಭಗವಂತ—ನಾನೇನೋ ಹೇಳಿದೆನು. ನಿನಗೆ ಸಮ್ಮತಿಯಿಲ್ಲದಿದ್ದರೆ ಬಿಟ್ಟು ಬಿಡು.

ವಿರಾಟ—ಈಗ ಅವನನ್ನು ಯಾರು ಕರೆತರಬೇಕು?

ಭಗವಂತ—ಮತ್ತಾರು? ಬೃಹನ್ನಳೆಯೇ ಕರೆತರಬೇಕು.

ವಿರಾಟ—ಬೃಹನ್ನಳೆ! ಅಭಿಮನ್ಯುವನ್ನು ಒಳಗೆ ಕರೆದುಕೊಂಡುಬಾ.

ಬೃಹನ್ನಳೆ—ಮಹಾರಾಜನೆ! ಅಪ್ಪಣೆ (ಆತ್ಮಗತಂ) ಬಹಳ ಹೊತ್ತಿನಿಂ ದಲೂ ನಾನೂ ಇದೇ ಆಣತಿಯನ್ನೇ ನಿರೀಕ್ಷಿಸುತಿದ್ದೆನು. ಸದ್ಯಕ್ಕೆ ದೈವವು ಅದನ್ನು ಒದವಿಸಿತು. (ಹೊರಕ್ಕೆ ಬರುವನು.)

ಭಗವಂತ—(ಆತ್ಮಗತಂ) ಈಗ ವತ್ಸನಾದ ಅಭಿಮನ್ಯುವನ್ನು ವಿಶಾಲವಾದ ಕಣ್ಣುಗಳಿಂದ ಹೀರಿ ಆನಂದಿಸಲಿ! ಇಲ್ಲವೇ, ಹೊರಗೆ ಯಾರೂ ಇಲ್ಲದಿದ್ದರೆ ಗಾಢವಾಗಿ ಆಲಿಂಗನವನ್ನಾದರೂ ಮಾಡಿ ಆನಂದಿಸಲಿ. ಇಲ್ಲವೇ, ಧೈರ್ಯವನ್ನು ತೊರೆದು ದುಃಖವು ಉಮ್ಮಳಿಸಿ ಬರುತ್ತಿರೆ ಕಣ್ಣೀರು ಸುರಿಸುತ್ತ ಗಟ್ಟಿಯಾಗಿ ರೋದನವನ್ನು ಮಾಡಿಯಾ ದರೂ ತನ್ನ ಕಷ್ಟವನ್ನು ನೆನೆನೆನೆದು ದುಃಖವನ್ನು ಹೋಗಲಾಡಿಸಿ ಕೊಳ್ಳಲಿ. ನನ್ನ ಇದಿರಾಗಿ ಕುವರನನ್ನು ಕಂಡು ಮನವಾರ ಮಾತನಾಡುವುದಕ್ಕೂ ಅರ್ಜುನನು ನಾಚುವನಲ್ಲವೇ? ಅದರಿಂ ದಲೇ ಅವನನ್ನೇ ಕಳುಹಿಸುವಂತೆ ಹೇಳಿದೆನು.

ವಿರಾಟ—ಭಗವನ್! ಇಂದು ಕುಮಾರನು ನಡೆಯಿಸಿದ ಅದ್ಭುತವನ್ನಾ ದರೂ ಕಂಡೆಯಾ?

ಉತ್ತರನು ಈ ದಿವಸ ಭೀಷ್ಮನೇ ಮೊದಲಾದ ದೊಡ್ಡ ದೊಡ್ಡ

ಅರಸರನ್ನೆಲ್ಲಾ ಭಂಗಗೊಳಿಸಿದನಲ್ಲವೇ? ಸೌಭದ್ರನೆಂದರೇನು ಸಾಮಾನ್ಯನೇ? ಅವನನ್ನು ಹಿಡಿಯುವುದೆಂದರೇನು, ಬಾಯಿ ಮಾತೇ? ಅಂತಹ ಅಭಿಮನ್ಯುವನ್ನೂ ಕೈಸೆರೆ ಹಿಡಿದುತಂದನಲ್ಲಾ!! ಒಟ್ಟನಮೇಲೆ ಭೂಮಂಡಲವನ್ನೇ ಗೆದ್ದನೆಂದು ಹೇಳಬಹುದು.

ಭೀಮ—(ಪ್ರವೇಶಿಸಿ) ಅರಗಿನಮನೆಗೆ ಬೆಂಕಿಹಚ್ಚಿದಾಗ ಸಹೋದರರನ್ನೂ ಜನನಿಯನ್ನೂ ನಿರಾಯಾಸವಾಗಿ ಅಷ್ಟುದೂರ ಹೆಗಲಿನ ಮೇಲೆ ಕೂಡಿಸಿಕೊಂಡು ಬಂದೆನಲ್ಲಾ! ಆಗಿನ ಕಾಲಕ್ಕಿಂತಲೂ ಈಗ ನನ್ನ ಬಲವೂ ಸಾಹಸವೂ ಧೈರ್ಯವೂ ನೂರು ಪಾಲು ಹೆಚ್ಚಾಗಿರುವುದೆಂದರೂ ಸಾಲದು. ಇಂತಿರಲು ಈ ದಿವಸ ಸುಭದ್ರೆಯ ತನಯನಾದ ಈ ಒಬ್ಬ ತರಳನನ್ನು ರಥದಿಂದ ಇಳಿಸಿ ನನ್ನ ರಥದಲ್ಲಿ ಕೂಡಿಸುವಷ್ಟರೊಳಗೆ ನನ್ನ ಹೆಗಲು ಮುರಿಯಿತು. ಅದೆಲ್ಲವೂ ಒಂದು ತೂಕ. ಇವನೊಬ್ಬನೇ ಒಂದು ತೂಕ. ಅಬ್ಬಬ್ಬಾ! ಇವನೆಲ್ಲಿಯ ಶೂರನೋ? ಎಷ್ಟು ಭಾರ! (ಪ್ರಕಾಶ) ಕುಮಾರನೆ! ಇತ್ತಿತ್ತ ಬಾ.

ಅಭಿಮನ್ಯು—(ಪ್ರವೇಶಿಸಿ) ಭೀಮನನ್ನು ನೋಡುತ್ತಿರುವಷ್ಟರಲ್ಲಿಯೇ ಬೃಹನ್ನಳೆಯೂ ಪ್ರವೇಶಿಸುವಳು.

ಅಭಿಮನ್ಯು—(ಭೀಮನನ್ನು ನೋಡಿ) ಅಯ್ಯಾ! ಇವನಾರಿರಬಹುದು! ಇವನ ಎದೆಯು ಕೋಟೆಯ ಬಾಗಿಲಿನಂತೆ ಅಗಲವಾಗಿರುವುದು. ಸೊಂಟವು ಕೃಶವಾಗಿ ಕಲ್ಲಿನಂತೆ ಗಟ್ಟಿಯಾಗಿರುವುದು. ಇವನ ಹೆಗಲಿನ ಸಂಧಿಯು ಬಲಯುಕ್ತವಾಗಿಯೂ ಎತ್ತರವಾಗಿಯೂ ಇರುವುದು. ತೊಡೆಗಳು ಮದ್ದಾನೆಯ ಸೊಂಡಿಲದಂತೆ ಬಲಿತು ದುಂಡಾಗಿರುವುವು. ಹೊಟ್ಟೆಯು ತೆಳ್ಳಗೆ ಸೂಕ್ಷ್ಮವಾಗಿರುವುದು. ನನ್ನನ್ನೂ ಲಕ್ಷ್ಯವಿಲ್ಲದೆ ಒಂದೇ ಕಂಕುಳಿನಲ್ಲಿಯೇ ಇರಿಕಿಸಿ ನಿರಾಯಾಸದಿಂದ ಹಿಡಿತಂದನಲ್ಲಾ! ನನಗಿಂತಲೂ ಇವನು ಬಲಾಧಿಕನಾಗಿದ್ದರೂ ಯಾವ ತೊಂದರೆಯನ್ನೂ ಮಾಡದೆ ಸುಮ್ಮನೆ ಕರೆತಂದಿರುವನು. ಕಾರಣವೇನು? ಇವನಾರಿರಬಹುದು?

ಬೃಹನ್ನಳೆ—ಕುಮಾರನೇ! ಇತ್ತ ಬಾ.

ಅಭಿಮನ್ಯು—ಎಲಾ! ಇವನಾವನೋ ಮತ್ತೊಬ್ಬನು! ಇವನಾರು? ಹೆಣ್ಣುವೇಷವು ಒಪ್ಪದೆ ಇದ್ದರೂ ಹೆಂಗಸರಂತೆಯೇ ಉಡಿಗೆ ತೊಡಿಗೆಗಳಿಂದ ಕೂಡಿ ಹೆಣ್ಣಾನೆಯ ವೇಷವನ್ನು ತಳೆದ ಗಂಡಾನೆಯಂತೆ ಕಾಣುವನಲ್ಲವೇ? ಇವನ ವೇಷವು ಸೂಕ್ಷ್ಮವಾಗಿದ್ದರೂ ತೇಜವು ಭಯಂಕರವಾಗಿಯೂ, ಪ್ರಸನ್ನವಾಗಿಯೂ ಇರುವುದು. ಇದೇನಾಶ್ಚರ್ಯವೋ ತಿಳಿಯೆನು! ಒಂದು ವೇಳೆ ಪರಮೇಶ್ವರನೇ ಏನಾದರೂ ಪಾರ್ವತಿಯ ವೇಷವನ್ನು ತಳೆದು ಬಂದಿರುವನೇನು? ಇವನಾರಿರಬಹುದು?

ಬೃಹನ್ನಳೆ—(ಮರೆಯಾಗಿ) ಆರ್ಯನೇ! ಏನುಮಾಡಬೇಕೆಂದು ಇವನನ್ನು ಇಲ್ಲಿಗೆ ಕರೆತಂದೆ? ನಿನ್ನ ಉದ್ದೇಶವಾದರೂ ಏನು? ಮೊತ್ತಮೊದಲಿನ ಯುದ್ಧದಲ್ಲಿಯೇ ಕುಮಾರನು ಸೋತುಹೋದನೆಂದು ಕೇಳಿ ಪುತ್ರವತ್ಸಲೆಯಾದ ಸುಭದ್ರೆಯು ಶೋಕಿಸಲೆಂದು ಕರೆತಂದೆಯಾ? ಪರಾಜಿತನೆಂದು ಕೃಷ್ಣನಿಗೆ ಸಿಟ್ಟೆಬ್ಬಿಸುವುದಕ್ಕಾಗಿ ಹಿಡಿತಂದೆಯಾ? ಹುಂ! ಆದುದಾಯಿತು. ಇನ್ನು ಮಾತನಾಡಿ ಫಲವೇನು? ಒಟ್ಟಿನಮೇಲೆ ನಿನ್ನ ನಡೆವಳಿಯು ಯುಕ್ತವಲ್ಲ. ನಾನು ಮೆಚ್ಚಲಿಲ್ಲ. ಸರ್ವವಿಧದಿಂದಲೂ ನಿನ್ನ ಬಾಹುಬಲವನ್ನು ದೋಷಯುಕ್ತವನ್ನಾಗಿಸಿದೆಯಲ್ಲಾ!

ಭೀಮ—ಅರ್ಜುನಾ; ವತ್ಸಾ!

ಬೃಹನ್ನಳೆ—ಆಹಾ! ತಡೆಯೇನು? ದಿಟವಾಗಿಯೂ ಇವನು ಅರ್ಜುನನ ಮಗನೇ ಹೌದು.

ಭೀಮ—(ಮರೆಯಾಗಿ) ಇವನನ್ನು ನಿಗ್ರಹಿಸಿದರೆ ಈ ದೋಷಗಳೆಲ್ಲವೂ ಸಂಭವಿಸುವುವೆಂಬುದನ್ನು ನಾನೂ ಬಲ್ಲೆನು. ಆದರೆ ನೋಡು. ಹೊಟ್ಟೆಯಲ್ಲಿ ಹುಟ್ಟಿದ ಮಗನು ಶತ್ರುರಕ್ಷದ ಕೈಸೇರಿರುವಲ್ಲಿ ಅದನ್ನು ಕಣ್ಣಾರನೋಡಿದ ಕಸಿಕರವುಳ್ಳ ಯಾವಮನುಷ್ಯನಾದರೂ ಸೈರಿಸಿಕೊಂಡಿರಲಾಪನೇ? ನನಗೇನೋ ಕರುಳು ನಿಲ್ಲಲಾರದೆ ಹೋಯಿತು. ಅದರಿಂದ ಕರೆತಂದೆನು. ಆದರೆ ಇಲ್ಲಿಗೆಕರತ

ರಲು ಕಾರಣವೇನೆಂದು ಕೇಳುವೆಯೋ? ಮಕ್ಕಳೆಂದರೆ ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ತಿಳಿದು ರಾತ್ರಿಹಗಲೂ ಹಂಬಲಿಸುತ್ತಿರುವ ದ್ರೌಪದಿಯು ಇವನನ್ನು ನೋಡಿಯಾದರೂ ತನ್ನ ದುಃಖವನ್ನು ಸ್ವಲ್ಪ ಮರೆಯಲೆಂದು ಹಿಡಿತಂದೆನು. ಅಷ್ಟೇ ಹೊರತು ಮತ್ತಾವ ದುರುದ್ದೇಶದಿಂದಲೂ ಕರೆತಂದವನಲ್ಲ! ನಿನಗಿಂತಲೂ ಮುಂಚೆಯೇ ನಾನೂ ಚೆನ್ನಾಗಿ ಯೋಚಿಸಿಯೇ ಈ ಕೆಲಸವಮಾಡಿದೆನು.

ಬೃಹನ್ನಳೆ—(ಮರೆಯಾಗಿ) ಆರ್ಯನೆ! ಇವನೊಡನೆ ಮಾತನಾಡಬೇಕೆಂದು ನನಗೆ ತುಂಬಾ ಕುತೂಹಲವಿರುವುದು. ಸ್ವಲ್ಪ ಮಾತನಾಡಿಸು ನೋಡುವ. ಹೊತ್ತಾಗದಲೇ ಸ್ವಲ್ಪ ಬೇಗನೆ.

ಭೀಮ—ಒಳ್ಳೆಯದು (ಅಭಿಮನ್ಯುವಿನ ಕಡೆ ತಿರುಗಿ) ಅಭಿಮನ್ಯುವೇ!

ಅಭಿ—ಏನು? ಏನು? ಅಭಿಮನ್ಯುವೇ? ಹೂಂ. ಜೋಕೆ.

ಭೀಮ—ಅಬ್ಬಬ್ಬಾ! ಇಷ್ಟೊಂದು ಕೋಪವಾದರೆ ಹೇಗೆ? ನನ್ನಿಂದಾಗದು. ನೀನೇ ಮಾತನಾಡಿಸು. ಬೃಹನ್ನಳೇ! ಇವನು ನಿನ್ನೊಡನೆ ಸಿಟ್ಟಾಗುವನು.

ಬೃಹನ್ನಳೆ—ಅಭಿಮನ್ಯೋ!

ಅಭಿ—ಹೇಗೆ? ಹೇಗೆ? ನನ್ನ ಹೆಸರನ್ನು ಹಿಡಿದು ಕೂಗುವೆಯಾ? ಅಭಿಮನ್ಯುವೇ! ಅಭಿಮನ್ಯು. ಅಭಿಮನ್ಯು. ಹೂಂ. ಅಯ್ಯೋ! ಅತ್ಯುತ್ತಮವಾದ ಚಂದ್ರವಂಶಕ್ಕೆ ಸೇರಿದ ಕ್ಷತ್ರಿಯಕುಲದಲ್ಲಿ ಜನಿಸಿದ ನನ್ನನ್ನು ಕೂಡ ಈ ನೀಚರು ಹೆಸರುಹಿಡಿದು ಕೂಗತೊಡಗಿದರು. ಛೀ, ಛೀ!! ಈಗ ಯೋಚಿಸಿ ಫಲವಿಲ್ಲ. ಈ ಕಾಲಕ್ಕೆ ಇದೂ ಯುಕ್ತವಾಗಿಯೇ ಇರುವುದು. ನಾನೀಗ ಇವರ ಕೈಗೆ ಸಿಕ್ಕಿರುವೆನಲ್ಲವೇ? ಅದರಿಂದಲ್ಲವೇ ಇವರೆಲ್ಲ ಇಷ್ಟು ಅಸಡ್ಡೆಯಿಂದ ಮಾತನಾಡಿಸುವರು!

ಬೃಹನ್ನಳೆ—ಅಭಿಮನ್ಯೋ! ನಿನ್ನ ಹೆತ್ತತಾಯಿಯು ಸುಖವಾಗಿರುವಳೇ?

ಅಭಿ—ಹೇಗೆ? ಹೇಗೆ? ನಮ್ಮ ಜನನಿಯೇ?

ಎಲಾ; ನೀಚನೇ; ದುರುಳನೇ: ನರಾಧಮನೇ! ನೀವಾರೋ

ನಮ್ಮ ತಾಯಿಯ ಸುದ್ದಿಯನ್ನು ಎತ್ತುವುದಕ್ಕೆ? ನೀನೇನು ಧರ್ಮರಾಜನೇ? ಇಲ್ಲವೇ ಭೀಮಸೇನನೇ? ಅಥವಾ ಅರ್ಜುನನೇ? ಹೆತ್ತ ತಂದೆಗೂ ಅತಿಶಯವಾಗಿ ನನ್ನ ಮೇಲೆ ಅಧಿಕಾರವನ್ನು ತೋರ್ಪಡಿಸುತ್ತಾ ಅಲ್ಲಿಗೂ ಸಾಲದೆ ಸ್ತ್ರೀಯರ ಸಮಾಚಾರವನ್ನೆಲ್ಲಾ ಕೇಳತೊಡಗಿರುವೆ. ಜೋಕೆ! ಅವರಲ್ಲಿಯೂ ಸಾಮಾನ್ಯ ಸ್ತ್ರೀಯಲ್ಲ! ಪಾಂಡವರ ಪ್ರಾಣಪದಕದಂತಿರುವ ಅರ್ಜುನನ ಪಟ್ಟಮಹಿಷಿಯಾದ ನಮ್ಮ ತಾಯಿಯ ಕ್ಷೇಮಸಮಾಚಾರವನ್ನೇ ನೀನು ಕೇಳುವುದು! ನಿನಗೆ ಮೈಮೇಲೆ ಚೆನ್ನಾಗಿ ಪ್ರಜ್ಞೆಯಿರುವಂತೆ ತೋರಲಿಲ್ಲ.

ಬೃಹನ್ನಳೆ—ಅಭಿಮನ್ಯುವೇ! ದೇವಕೀಪುತ್ರನಾದ ಕೇಶವನು ಸೌಖ್ಯವಾಗಿರುವನಷ್ಟೆ?



ಅಭಿಮನ್ಯು—ಏನು? ಪೂಜ್ಯನಾದ ನಮ್ಮ ಸೋದರಮಾವನನ್ನೂ ಹೆಸರು ಹಿಡಿದೇ? ಆತನ ಕುಶಲವಾರ್ತೆಯನ್ನು ಕೇಳುವುದಕ್ಕೆ ನೀನಾರು? ಆತನ ಮಿತ್ರನೇ? ಆಪ್ತನೇ? ಇಷ್ಟನೇ? ಬಂಧುವೇ? ಬಳಗವೇ? ನಿನಗೂ ಆತನು ಸಮಾನಸ್ಕಂಧನೋ? ಆತನ ಕ್ಷೇಮಸಮಾಚಾರವನ್ನು ನೀನೂ ವಿಚಾರಿಸತಕ್ಕ ದೊಡ್ಡ ಮನುಷ್ಯನೋ? (ಸ್ವಲ್ಪ ಯೋಚಿಸಿ) ಛೀ! ಇವರೊಂದಿಗೆ ಹೆಚ್ಚು ಮಾತು ಬೆಳೆಯಿಸಿ ಫಲವಿಲ್ಲ. (ಪ್ರಕಾಶಂ) ಆಹಾ! ಆಹಾ! ಕುಶಲವಾಗಿರುವನು. ಈಗ ನಿನ್ನ ಕುಶಲಪ್ರಶ್ನೆಯಿಂದ ಸೌಖ್ಯವಾಗಿರುವನು. ಈಗ್ಗೆ ಸದ್ಯಕ್ಕೆ ನಿನ್ನ ದಯೆಯಿಂದ ಎಲ್ಲರೂ ಸುಖವಾಗಿರುವೆವು.

(ಭೀಮಾರ್ಜುನರು ಒಬ್ಬೊರನ್ನೊಬ್ಬರು ನೋಡಿ ನಗುವರು.)

ಅಭಿ—ಇದೇನು? ನನ್ನನ್ನು ನೋಡಿ ಇವರಿಬ್ಬರೂ ಏನನ್ನೋ ಸಂಕೇತ ಮಾಡಿಕೊಂಡು ಅಸಡ್ಡೆಯಿಂದ ಪರಿಹಾಸಮಾಡತೊಡಗಿದರು!

ಬೃಹನ್ನಳೆ—ಅಭಿಮನ್ಯುವೇ! ಏನೂ ಇಲ್ಲ. ನಿನ್ನ ಮಾತಿಗೂ ನಾಹ ಸಕ್ಕೂ ಸಂಬಂಧವಿಲ್ಲದಿರುವುದು. ಕಯ್ಯಲಾಗದ ಮಾತಿನ ಮಲ್ಲನಂತೆ ಕಾಣುವೆಯಾಗಿ ನಾವಿಬ್ಬರೂ ನಕ್ಕೆವು. ಅಷ್ಟೇ. ಮತ್ತೇನೂ ಇಲ್ಲ. ಏಕೆಂದರೆ:—

ಅಂತಹ ಅರ್ಜುನನಿಗೆ ಮಗನಾಗಿ ಹುಟ್ಟಿ, ಜನಾರ್ದನನಿಗೆ ಸೋದರ ಳಿಯನಾಗಿ ತರುಣನೂ, ಅಸ್ತ್ರವಿದ್ಯಾಪಾರಂಗತನೂ ಎನ್ನಿಸಿ ಲೋಕದಲ್ಲೆಲ್ಲಾ ಹೊಗಳಿಸಿಕೊಳ್ಳುವ ನೀನೂ ಯುದ್ಧದಲ್ಲಿ ಒಬ್ಬ ಯೋಧವೀರನ ಕೈಗೆ ಸಿಕ್ಕಿದೆಯಲ್ಲಾ! ಈರೀತಿ ಹಗೆಗಳ ಕೈಸೇರಿದ್ದರೂ ನಿನ್ನ ಅಹಂಕಾರವು ಮಾತ್ರ ಮೊದಲಿಗಿಂತಲೂ ಇಮ್ಮಡಿಯಾಗಿರುವುದಲ್ಲಾ! ಎಂದು ನಕ್ಕೈವು. ಇದೂ ಒಂದು ಶೂರಧರ್ಮವೇನೋ? ಇದಾವ ಪರಾಕ್ರಮವೋ? ಇದೆಲ್ಲಿಯ ಮರ್ಯಾದೆಯೋ? ಹೀಗೂ ಉಂಟೇನೋ?

ಅಭಿ—ಸಾಕು. ಸಾಕು. ಬಾಯಿಗೆ ಬಂದಂತೆ ಮಾತನಾಡಿದರೇನಾಯಿತು?

ನಾನಾಗಿಯೇ ನನ್ನ ಸಾಹಸವನ್ನು ಹೊಗಳಿಕೊಳ್ಳುವುದು ನನ್ನ ಕುಲಧರ್ಮವಲ್ಲ. ನಿನಗೆ ನಂಬುಗೆ ಸಾಲದಿದ್ದರೆ ರಣರಂಗದಲ್ಲಿ ಹೋಗಿ ನೋಡು. ಸತ್ತಿರುವ ಯೋಧವೀರರ, ಆನೆ ಕುದುರೆಗಳ ಮೈಯಲ್ಲಿ ಪರೀಕ್ಷೆ ಮಾಡಿ ನೋಡು. ಮತ್ತಾರ ಹೆಸರಿನ ಬಾಣಗಳೇನಾದರೂ ಒಂದಾದರೂ ಇರುವುವೇನೋ? ನೋಡಿ ಬಾ.

ಬೃಹನ್ನಳೆ—(ಆತ್ಮಗತಂ) ಭಲಾ! ಕುಮಾರನ ಮಾತು ಯುಕ್ತವಾದುದು. ತೇರುಗಳೂ ಮದ್ದಾನೆಗಳೂ, ಕೊಬ್ಬಿದ ವೀರಪುರುಷರೂ ಉತ್ತಮವಾದ ತೇಜಿಗಳೂ ಇವನ ಬಾಣದ ಮೊನೆಯು ಸೋಕಿದ ಕೂಡಲೇ ಪ್ರಾಣವನ್ನು ಬಿಟ್ಟುಬಿಟ್ಟು ಪರಲೋಕಯಾತ್ರೆಮಾಡಿದುವೆನ್ನುವುದು ಅತಿಶಯವಲ್ಲ. ಇವನ ಬಾಣದ ಪೆಟ್ಟಿಗೆ ಗುರಿಯಾಗದವನೂ ಇರುವನೇ? ನಾನೂ ಇವನ ಕೈಗೆ ಸಿಕ್ಕುಬಿದ್ದು ಹಲ್ಲು ಕಿರಿಯಬೇಕಾದ ಸಂಭವವು ಒದಗಿದ್ದಿತು. ಆದರೆ ಆ ಕಾಲಕ್ಕೆ ಸರಿಯಾಗಿ ನಾನು ರಥವನ್ನು ಹಿಂದಿರುಗಿಸದಿದ್ದರೆ ಆ ಪ್ರಾಯಶ್ಚಿತ್ತವು ನನಗೂ ತಪ್ಪುತ್ತಿರಲಿಲ್ಲ. (ಪ್ರಕಾಶಂ) ಇದೆಲ್ಲಾ ಮಾತಿನ ಚಮತ್ಕಾರ. ನಿನ್ನನ್ನು ಹರಟೆಯ ಮಲ್ಲನೆಂದು ತಿಳಿದೆನು. ಇಷ್ಟೊಂದು ಸಾಹಸಗಾರನಾದ ನೀನು ಆ ಕಾಲಾಳಿನ ಕೈಗಾದರೂ ಸಿಕ್ಕಿದುದು ಹೇಗೆ? ಈಗ ಈ ಮಾತಿಗೆ ಪ್ರತ್ಯುತ್ತರವೇನು?

ಅಭಿ—ಕೈಯಲ್ಲಿ ಆಯುಧವಿಲ್ಲದೆ ಬರಿಯ ಕಯ್ಯಲ್ಲಿ ನನ್ನ ಹತ್ತಿರ ಬಂದನು. ಅದರಿಂದ ನಾನಿವನ ಕೈಗೆ ಸಿಕ್ಕಿದೆನು. ಆಯುಧ ವನ್ನು ಕೆಳಗಿಟ್ಟ ಯೋಧನನ್ನು ಕೊಲ್ಲುವುದು ಕ್ಷತ್ರಿಯಧರ್ಮವಲ್ಲ. ಅದರಲ್ಲಿಯೂ, ಅಂತಹ ಲೋಕೈಕವೀರನಾದ ಅರ್ಜುನನಿಗೆ ಮಗ ನಾಗಿ ಹುಟ್ಟಿ ನಾನೂ ಇಂತಹ ಹೇಸಿಗೆಯ ಕೆಲಸವನ್ನು ಮಾಡಲೇ? ನಮ್ಮ ತಂದೆಯ ಹೆಸರನ್ನು ಕಿವಿಯಿಂದ ಕೇಳಿದವನೂ ಅಂತಹ ಕೆಲಸವನ್ನು ಮಾಡಲಾರನು.

ಭೀಮ—(ಆತ್ಮಗತಂ) ಅವನಲ್ಲವೇ ಧನ್ಯನು! ಮಕ್ಕಳು ಹುಟ್ಟಿದರೆ ಇಂ ತವರಿರಬೇಕು. ತಂದೆಮಕ್ಕಳ ಸಾಹಸವನ್ನೂ, ಪರಾಕ್ರಮ ವನ್ನೂ, ಶ್ಲಾಘನೀಯವಾದ ಶೌರ್ಯವನ್ನೂ ಕಿವಿಯಾರ ಮಗನ ಬಾಯಿಂದಲೇ ಕೇಳಿದ ಅರ್ಜುನನು ಅನ್ನೆಂತಹ ಸುಕೃತಶಾ ಲಿಯೋ? ತಿಳಿಯೆನು.

ವಿರಾಟ—ಬೇಗನೆ ಕರೆದುಕೊಂಡು ಬಾ. ಅಭಿಮನ್ಯುವನ್ನು ಬೇಗನೆ ಕರೆದುಕೊಂಡು ಬಾ. ಇಷ್ಟು ಸಾವಕಾಶವೇಕೆ?

ಬೃಹನ್ನಳೆ—ಕುಮಾರನೆ! ಇತ್ತಿತ್ತ ಬಾ. ಅಗೋ ಮಹಾರಾಜನು. ಗೌರವಿಸು.

ಅಭಿ—ಆಃ! ಈ ಮಾತುಗಳು ಕರ್ಣಕಠೋರವಾಗಿರುವುವು. ಮಹಾ ರಾಜನಂತೆ! ಮಹಾರಾಜ! ಯಾರಿಗಯ್ಯಾ ಇವನು ಮಹಾ ರಾಜ! ನಿನಗಿರಬಹುದು.

ಬೃಹ—ಅಲ್ಲ. ಹಾಗಲ್ಲ. ಬ್ರಾಹ್ಮಣನೊಂದಿಗೆ ಕುಳಿತಿರುವನು.

ಅಭಿ—ಏನು? ಬ್ರಾಹ್ಮಣನೂ ಸಂಗಡ ಕುಳಿತಿರುವನೆಂದೆಯಾ? (ಬಳಿ ಸಾರ್ದು) ಪೂಜ್ಯರೇ! ಕುರುಕುಲಾವತಂಸನಾದ ಪಾರ್ಥನ ತನ ಯನಾದ ಸೌಭದ್ರನು ವಂದಿಸುವನು.

ಭಗವಂತ—ಬಾ, ಬಾ. ವತ್ಸಾ! ನಿಮ್ಮ ತಂದೆಯಾದ ಅರ್ಜುನನ ಗುಣ ಗಳಲ್ಲಿ ತ್ಯಾಗ, ಧೈರ್ಯ, ವಿನಯ, ದಯೆ, ಮಾಧುರ್ಯ, ಜಯ, ಪರಾ ಕ್ರಮಗಳನ್ನೂ, ಲೋಕೋತ್ತರವಾದ ಬಿಲ್ಲಿನ ಜಾಣ್ಮೆಯನ್ನೂ

ಹೊಂದುವವನಾಗು. ಮಿಕ್ಕ ನಾಲ್ವರ ಗುಣಗಳಲ್ಲಿ ನಿನಗೆ ಯಾವ ಯಾವುವು ರುಚಿಸುವುವೋ ಅವುಗಳನ್ನೂ ಪಡೆ.

ಅಭಿ—ಅನುಗೃಹೀತನಾದೆನು. ಧನ್ಯನಾದೆನು.

ವಿರಾಟ—ಪುತ್ರನೇ! ಬಾ, ಬಾ. ಇತ್ತ ಬಾ, ಇದೇನು? ನನ್ನ ಸಂಗಡ ಮಾತನಾಡಲೊಲ್ಲೆಯಾ? ಅಬ್ಬಬ್ಬಾ! ಈ ಕ್ಷತ್ರಿಯ ಕುಮಾರನು ಎಷ್ಟು ಕೊಬ್ಬಿರುವನು? (ಆತ್ಮಗತಂ) ಆಗಲಿ. ನಾನಿವನ ದರ್ಪವನ್ನು ಅಡಗಿಸುವೆನು. (ಪ್ರಕಾಶಂ) ಇವನನ್ನು ಹಿಡಿತಂದವರಾರು?

ಭೀಮ—ಮಹಾರಾಜನೇ! ನಾನು.

ಅಭಿ—'ಕೈಯಲ್ಲಿ ಆಯುಧವಿಲ್ಲದೆ ರಥವನ್ನು ಏರಿ'—ಎಂದು ಹೇಳು.

ಭೀಮ—ಶಿವಶಿವಾ! ಈಗ ಚೆನ್ನಾಯಿತು.

ಬಲಿತು ಮಾಂಸಪುಷ್ಟವಾಗಿ, ಮಿನುಗುಟ್ಟುತ್ತಿರುವ ಈ ತೋಳುಗಳೇ ನನಗೆ ಸಹಜವಾದ ಆಯುಧವು. ಇವುಗಳ ಬಲದಿಂದಲೇ ಹಿಂದೆ ಎಷ್ಟೋ ಮಂದಿಯನ್ನು ಸಾಯಬಡಿದಿರುವೆನು. ಯುದ್ಧದಲ್ಲಿಯೂ ಇವೇ ನನ್ನ ಆಯುಧಜಾತವು. ಬಲಹೀನರಾದ ನಿನ್ನಂತಹ ಹೇಡಿಗಳಿಗಲ್ಲವೇ ಆಯುಧಗಳ ಆವಶ್ಯಕತೆ! ನನಗೇಕೆ ಅವುಗಳಗೊಡವೆ? ನಾನೂ ನಿನ್ನಂತಹ ಬಲಹೀನನೆಂದರಿತೆಯಾ?

ಅಭಿ—ಹಾಗಾದರೆ ಆಯುಧಗಳನ್ನು ಹಿಡಿದಿರುವವರೆಲ್ಲರೂ ಬಲಹೀನರು! ನೀನೊಬ್ಬನು ಮಾತ್ರ ಬಲಾಧಿಕನೋ?

ಭೀಮ—ಇರಬಹುದು. ಏಕೆ ಆಗಬಾರದು? ನೀನೇ ಯೋಚಿಸಿ ನೋಡು.

ಅಭಿ—ನಮ್ಮ ತಂದೆಯೂ, ಆತನ ಒಡಹುಟ್ಟಿದವರೂ, ಅವರ ಚಾಪವಿದ್ಯಾಗುರುವಾದ ಆರ್ಯದ್ರೋಣನೂ, ನಮ್ಮ ಮುತ್ತಾತನಾದ ಭೀಷ್ಮನೂ ಅವರೆಲ್ಲರೂ ಬಲಹೀನರಲ್ಲವೇ? ನೀನೊಬ್ಬನೇನೋ ವೀರನು!

ಭೀಮ—ಈಗ ಅವರ ಸುದ್ದಿಗೆ ಪ್ರಸಕ್ತಿಯಿಲ್ಲ. ನಿನ್ನ ಮಾತನ್ನು ಹೇಳು.

ಅಭಿ—ಸಾಕು. ಸಾಕು. ಅಯ್ಯಾ; ವೀರವಾಸಿಯೆ! ಹೆಚ್ಚಿಗೆ ಮಾತನಾಡಬೇಡ. ನಿನ್ನ ತೋಳುಗಳೇ ನಿನಗೆ ಆಯುಧವೆಂದಲ್ಲವೇ ಹೇಳಿದೆ?

ಭೀಮ—ಆಹಾ! ಈಗಲೂ, ಮತ್ತೂ, ಮುಮ್ಮೂರು ಬಾರಿಗೂ.

ಅಭಿ—ಹಾಗಾದರೆ, ಎರಡು ತೋಳುಗಳನ್ನೂ ಎರಡು ಅಕ್ಷೌಹಿಣಿಯ ಸೇನೆಗೆ ಸಮನಾಗಿ ಭಾವಿಸಿ ನಿರ್ವ್ಯಾಜ ಪರಾಕ್ರಮದಿಂದ ಕಾಂಗೊಳಿಸುವ ನಮ್ಮ ಎರಡನೆಯ ದೊಡ್ಡಪ್ಪನಾದ ಭೀಮಸೇನನೋ ನೀನು? ಈ ಮಾತು ಆತನಿಗೆ ಒಬ್ಬನಿಗೆ ಸಲ್ಲತಕ್ಕದು. ನೀನೇಕೆ ಆತನೊಡನೆ ನಿನ್ನನ್ನು ಹೋಲಿಸಿ ಅನ್ಯಾಯವಾಗಿ ಆತನ ಕೀರ್ತಿಯನ್ನು ದೂಷಿಸುವೆ? ಸಾಕು. ಸಾಕು. ಬಾಯಿಮುಚ್ಚು.

ಭೀಮ—ರಣರಂಗದಲ್ಲಿ ಹಗೆಯು ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳಲಾರದೆ ಯಾವನೋ ಒಬ್ಬ ಯೋಧವೀರನ ಕೈಗೆ ಸಿಕ್ಕಿ ಶತ್ರುಗಳ ಪಾಲಾಗಿ ನಾಚಿಕೆಯಿಲ್ಲದೆ ಏನೇನನ್ನೋ ಹರಟುತ್ತಾ, ನಿಮ್ಮ ದೊಡ್ಡಯ್ಯನೆಂದು ಹೇಳಿಕೊಂಡರೆಮಾತ್ರ ಭೀಮನಿಗೆ ಅಪಕೀರ್ತಿಯಲ್ಲ! ನಾನು ಆತನೋ ಅಥವಾ ಆತನಿಗೆ ಸದೃಶನೋ ಎಂದು ಹೇಳಿಕೊಂಡರೆ ಮಾತ್ರ ಆತನಿಗೆ ಬಂದ ಅಪಕೀರ್ತಿಯು ಯಾವುದೋ? ನಾನರಿಯೆನು. ಇಷ್ಟರಮೇಲೆ ನಾನೇ ಬಾಯಿಮುಚ್ಚಬೇಕಂತೆ! ಕಾರಣವಾವುದೋ?

ಭಗವಂತ—ಮಗೂ! ಅವನಾವನು ಪಾಂಡವಮಧ್ಯಮನೆಂಬುವನು?

ಅಭಿ—ಪೂಜ್ಯನೆ! ಲಾಲಿಸು. ಅಥವಾ ಬ್ರಾಹ್ಮಣನನ್ನು ಪಾರ್ಶ್ವದಲ್ಲಿ ಇದಿರಿಸಿ ಮಾತನಾಡಲೊಲ್ಲೆನು. ಒಳ್ಳೆಯದು. ಇದೇ ಪ್ರಶ್ನೆಯನ್ನೇ ಮತ್ತಾರಾದರೂ ಕೇಳಿದರೆ ತಕ್ಕಪ್ರತ್ಯುತ್ತರವನ್ನು ಕೊಡುತ್ತಿದ್ದೆನು. ಇಲ್ಲದಿದ್ದರೆ, ಆತನು ಯಾರಾದರೇನು? ಯಮನಿಗೇ ಒಪ್ಪಿಸು.

ವಿರಾಟ—ಒಳ್ಳೆಯದು. ವತ್ಸಾ! ನನ್ನ ಮಾತನ್ನು ಕೇಳಿ ಪ್ರತ್ಯುತ್ತರವನ್ನು ಕೊಡು. ಆತನಾರು ಮಧ್ಯಮನೆಂಬುವನು?

ಅಭಿ—ಅವಧರಿಸು.

ಜರಾಸಂಧನ ಸೊಂಟಕ್ಕೆ ಕೈಯನ್ನು ಚಾಚಿ, ಬಾಹುಲತೆಯೆಂಬ ಹಗ್ಗದಿಂದ ಬಲವಾಗಿ ಬಿಗಿದು ಸೀಳಿಹಾಕಿ, ಭಯಂಕರವಾದ ಆ ಕಾರ್ಯವನ್ನು ರಚಿಸಿ, ಕೃಷ್ಣನನ್ನು ದಶಾರ್ಹಕುಲಸಂಭೂತನೇ ಅಹುದೆಂದು ಲೋಕವೆಲ್ಲಾ ಡಂಗುರಹೊಯಿಸಿ ಸತ್ಯಪ್ರತಿಜ್ಞನನ್ನಾಗಿಸಿದವನು ಮಧ್ಯಮತಾತನು.

ವಿರಾಟ—ನಿನ್ನ ದೂಷಣೆಯಿಂದ ನಾನು ಎಷ್ಟುಮಾತ್ರವೂ ಸಿಟ್ಟುಗೊಳ್ಳೆನು. ನೀನು ಕೋಪಿಸಿಕೊಂಡಷ್ಟೂ ನನ್ನ ಅಂತರಂಗವು ಆನಂದಸಾಗರದಲ್ಲಿ ತೇಲಾಡುವುದು. ನಾನು ನಿನ್ನ ಅಪರಾಧಿಯಲ್ಲ. ಆದರೂ ನೀನು ಮಾತನಾಡಿದರೆ ಏನೋ ಎಂದು ಭಯವಾಗುವುದು. "ನಿಂತುಕೊಂಡಿರುವೆಯೇಕೆ?" ಎಂದರೇನು ಅನರ್ಥವೋ? "ಒಳ ಹೊಕ್ಕು ವಿಶ್ರಮಿಸಿಕೊಳ್ಳೆಂದರೆ" ಏನೋ? ತಿಳಿಯದಿರುವೆನು.

ಅಭಿ—ನನ್ನ ವಿಷಯದಲ್ಲಿ ಅಷ್ಟೊಂದು ಅನುಗ್ರಹವಿದ್ದುದಾದರೆ—ನಿಗ್ರಹೋಚಿತವಾದ ಮರ್ಯಾದೆಯನ್ನು ಕಾಲುಗಳಿಗೆ ರಚಿಸಬಹುದಲ್ಲ! ಈ ಭೀಮನು ತೋಳ್ಬಲದಿಂದಲ್ಲವೇ ಜರೆತಂದನು? ಈಗಲೂ ಆತನೇ ತನ್ನ ಬಾಹುಬಲದಿಂದಲೇ ಉಯ್ಯುವನು.

ಉತ್ತರ—(ಪ್ರವೇಶಿಸಿ) ಛೀ, ಛೀ!! ಲೋಕದಲ್ಲಿ ಮಿಥ್ಯಾಪ್ರಶಂಸೆಗೆ ಮಾತ್ರ ಮನುಷ್ಯನು ಎಂದೆಂದಿಗೂ ಗುರಿಯಾಗಬಾರದು. ಈ ದಿನ ನಡೆದ ಯುದ್ಧದಲ್ಲಿ ನಾನಾವುದೋ ಮಹತ್ತರವಾದಕಾರ್ಯಸಾಧನೆಯನ್ನು ಮಾಡಿದಂತೆ ಜನಗಳೆಲ್ಲರೂ ಭಾವಿಸಿ, ನನ್ನನ್ನು ಬಗೆಬಗೆಯಿಂದ ಪ್ರಶಂಸಿಸಿ, ಹೊಗಳುತ್ತಿರುವರು. ನಾನು ದಿಟವನ್ನು ಹೇಳಿದರೂ ಯಾರೂ ನನ್ನ ಮಾತನ್ನೇ ನಂಬದಿರುವರು. ಆತನು ಹೇಳಿದ ಸುಳ್ಳುಮಾತುಗಳಲ್ಲಿಯೇ ಜನಗಳಿಗೆ ಹೆಚ್ಚಿನ ಆದರವೂ ಭಕ್ತಿಭಾವನೆಯೂ ಇರುವುದು. ಯುದ್ಧರಂಗದಲ್ಲಿ ಸದ್ಯಕ್ಕೆ ಪ್ರಾಣದಿಂದ ಬಿಟ್ಟರೆ ಸಾಕೆಂದು ಮೊರೆಯಿಟ್ಟು ಗೋಳಾಡಿ ಕೈಕಾಲುಗಳಿಗೆ ಎರಗಿ ಬೇಳಾಡಿದರೂ ಬಿಡದೆ ಆತನ ಮಾತನ್ನು ಅನುವರ್ತಿಸಿರುವಂತೆ ನನ್ನನ್ನು ಜಗ್ಗಿಸಿ ಈ ಮಹತ್ತರವಾದ ಅದ್ಭುತವನ್ನು

ರಚಿಸಿದನು. ಆದರೂ ಜನಗಳಿಗೆ ನನ್ನ ಮಾತಿನಲ್ಲಿ ನಂಬುಗೆ ಯಿಲ್ಲ. ಜನಗಳ ಕೊಂಡಾಟವನ್ನು ಕೇಳಿದರೆ ನನಗೇ ನಾಚಿಕೆ ಯಾಗುವುದು. (ಬಳಿಸಾರ್ದು)

ಭಗವಂತನೇ! ವಂದಿಸುವೆನು.

ಭಗವಂತ—ಸ್ವಸ್ತಿ.

ಉತ್ತರ—ಪಿತನೆ! ನಮಸ್ಕರಿಸುವೆನು.

ವಿರಾಟ—ಬಾ. ಬಾ. ವತ್ಸಾ! ಆಯುಷ್ಮಂತನಾಗು. ಮಗೂ! ಸಾಹಸವನ್ನುತೋರಿದ ಯೋಧವೀರರನ್ನೆಲ್ಲಾ ತಕ್ಕ ರೀತಿಯಿಂದ ಮನ್ನಣೆ ಮಾಡಿಬಂದೆಯಾ?

ಉತ್ತರ—ಆಯಿತು. ಪೂಜ್ಯತಮನಾದ ಈ ಮಹಾಮಹಿಮನಮರ್ಯಾದೆಯು ಮಾತ್ರ ನಿಂತಿರುವುದು. ಅದನ್ನು ನೀನೇ ನಮ್ಮ ಶಕ್ತಿ ಮೀರಿ ನಡೆಯಿಸಬೇಕು.

ವಿರಾಟ—ಪುತ್ರನೆ! ಯಾರಿಗೆ?

ಉತ್ತರ—ಇಗೋ ನೋಡು. ಪೂಜ್ಯತಮನಾದ ಧನಂಜಯನಿಗೆ.

ವಿರಾಟ—ಏನು? ಧನಂಜಯನಿಗೆನ್ನುವೆಯಲ್ಲಾ! ಈತನೇ! ಧನಂಜಯನು?

ಉತ್ತರ—ಆಹಾ! ಮತ್ತೇನೆಂದಿರುವೆ? ಈತನೇ ಧನಂಜಯನು. ಈ ಮಹಾನುಭಾವನು ಸ್ಮಶಾನದ ಹತ್ತಿರ ರಥವನ್ನು ನಿಲ್ಲಿಸಿ ಬಿಲ್ಲುಬಾಣಗಳನ್ನೂ, ಅಕ್ಷಯವೆನಿಸಿದ ಬತ್ತಳಿಕೆಗಳನ್ನೂ ತಂದು ಭೀಷ್ಮನೇ ಮೊದಲಾದ ವೀರರನ್ನು ಹಿಂದಟ್ಟಿ ನನ್ನ ಪ್ರಾಣವನ್ನು ಉಳಿಸಿ ರಾಜ್ಯಸ್ಥಿತಿಯನ್ನು ಕಾಪಾಡಿ ನೆಲೆಗೊಳಿಸಿದ ಪರಾಕ್ರಮಾವತಾರಭೂತನು ಈ ಮಹಾಮಹಿಮನು. ಈತನೆಂದರೆ ಯಾರೆಂದು ತಿಳಿದೆ?

ಬೃಹನ್ನಳೆ—ಮಹಾರಾಜನೆ! ಪ್ರಸನ್ನನಾಗು; ನನ್ನ ಮಾತನ್ನು ಲಾಲಿಸಬೇಕುವೆನು. ಈ ಮನುಜನ ಮಾತನ್ನು ನಂಬದಿರು.

ಈತನು ಇನ್ನೂ ತರಳನಾದ ಪ್ರಯುಕ್ತ ಗಾಬರಿಗೊಂಡು ತಾನು ಮಾಡಿದ ಕೆಲಸವನ್ನೇ ಅರಿಯದಿರುವವನಂತೆ ತನ್ನ ಸಾಹಸವನ್ನು

ತಾನೇ ಹೊಗಳಿಕೊಳ್ಳಲು ಹಿಂಜರಿಯುವನು. ಎಲ್ಲ ಕೆಲಸವನ್ನು ತಾನೇ ಮಾಡಿದ್ದರೂ ಇತರರ ಮೇಲೆ ಆರೋಪಿಸುವನು. ಇದಲ್ಲವೇ ವೀರಪುರುಷ ಲಕ್ಷಣವು!

ಉತ್ತರ—ಪಿತನೇ! ಸಂದೇಹವು ಎಷ್ಟು ಮಾತ್ರವೂ ಬೇಡ. ನನ್ನ ಮಾತು ಹಾಗಿರಲಿ. ಇದೇ ನಿನಗೆ ಸಾಕಾದಷ್ಟು ನಂಬುಗೆಯನ್ನುಂಟುಮಾಡುವುದು. "ಅಂಗಯ್ಯ ಹುಣ್ಣಿಗೂ ಕನ್ನಡಿ ಬೇಕೆ?" ಇತ್ತ ನೋಡು. ಮುಂಗೈಯಲ್ಲಿ ಗೂಢವಾಗಿರುವ ಗಂಟು. ಇದು ಗಾಂಡೀವ ಧನುಸ್ಸಿನ ಹೆದೆಯನ್ನು ಸೆಳೆಯುವುದರಿಂದ ಉಂಟಾದ ಗಾಯವು. ಚರ್ಮವೆಲ್ಲವೂ ಒರಟಾಗಿ ಗಂಟುಕಟ್ಟಿರುವುದು. ಹನ್ನೆರಡು ವರ್ಷಗಳಿಂದಲೂ ಗಾಂಡೀವವನ್ನು ಕಯ್ಯಲ್ಲಿ ಹಿಡಿಯದಿದ್ದರೂ ಇನ್ನೂ ಸುತ್ತುಮುತ್ತಣ ಚರ್ಮಕ್ಕೆ ಸಮವಾಗಿ ಬಣ್ಣವು ಬಾರದೆ ಇರುವುದು. ಗಾಯವು ಇನ್ನೂ ಮಾಸಿಹೋಗಲಿಲ್ಲ.

ಬೃಹನ್ನಳೆ—ಏನು? ಇದೇ? ಈ ಗಂಟೇ? ಇದು—
ನಾನು ಮದ್ದಳೆಯನ್ನು ಬಾರಿಸುವ ಕಾಲದಲ್ಲಿ ಕೈಕಡಗಗಳನ್ನು ಹಿಂದಕ್ಕೆ ಒತ್ತಿ ಒತ್ತಿ ಇಲ್ಲಿನ ಚರ್ಮವೆಲ್ಲಾ ಒರಟಾಗಿ ಗಂಟುಕಟ್ಟಿಕೊಂಡಿರುವುದು. ಮೇಲೆ ಮೇಲೆ ಅಡಿಬೀಳುತ್ತಿರುವ ಕಾರಣ ಹೊಸ ಚರ್ಮವು ಹುಟ್ಟಿ ಬಣ್ಣವು ಸರಿಹೋಗಲು ಅವಕಾಶವಿಲ್ಲ.

ವಿರಾಟ—ಎಲ್ಲಿ? ಇತ್ತ ತೋರು. ನಾನೊಮ್ಮೆ ನೋಡುವೆನು.

ಬೃಹನ್ನಳೆ—ಪರಮೇಶ್ವರನ ಬಾಣಗಳಿಂದ ಗಾಯವನ್ನು ಪಡೆದ ಶರೀರವುಳ್ಳ ನಾನು ಅರ್ಜುನನಾದರೆ, ಭರತಚಕ್ರವರ್ತಿಯ ಕುಲದಲ್ಲಿ ಜನಿಸಿದ ಭೀಮಸೇನನು ಈತನೇ ಎನ್ನಲು ಸಂದೇಹವೆಲ್ಲಿಯದು? ಬಳಿಕ ಈತನನ್ನೇ ಯುಧಿಷ್ಠಿರನೆನ್ನಬಹುದಲ್ಲವೇ?

ವಿರಾಟ—ಧರ್ಮರಾಜನೆ! ವೃಕೋದರನೆ! ಧನಂಜಯನೆ! ನನ್ನ ವಿಷಯದಲ್ಲಿಯೂ ನಿಮಗೆ ನಂಬುಗೆಯಿಲ್ಲವೇ? ಇರಲಿ. ಇರಲಿ. ಕಾಲ ಬಂದಾಗಲೇ ನಿಮ್ಮನ್ನು ನೀವಾಗಿಯೇ ಪ್ರಕಾಶಗೊಳಿಸುವಿರಂತೆ. ಈಗ ನಾನು ಬಲಾತ್ಕಾರಗೊಳಿಸಲೊಲ್ಲೆನು. ಭಗವನ್! ಬೃಹನ್ನಳೆಯು ಬಿಳಿಕ್ಕೆ ಕರಳಬಹುದಲ್ಲವೇ?

ಬೃಹನ್ನಳೆ—ಮಹಾರಾಜನೆ! ಅಪ್ಪಣೆ.

ಭಗವಂತ—ವತ್ಸ ಅರ್ಜುನನೆ! ಬೇಡ. ಭಯವಿಲ್ಲ. ಒಳಗೆ ಹೋಗಬೇಕಾದ ಪ್ರಮೇಯವಿಲ್ಲ. ನಮ್ಮ ಪ್ರತಿಜ್ಞೆಯು ಗಡುವು ತೀರಿತು. ನಾವು ಈ ಮೇಲೆ ಧೈರ್ಯವಾಗಿ ಪ್ರಕಾಶವಾಗಿಯೇ ಸಂಚರಿಸಬಹುದು.

ಅರ್ಜುನ—ಆರ್ಯನ ಅಪ್ಪಣೆಯನ್ನು ಶಿರಸಾವಹಿಸಿದೆನು.

ವಿರಾಟ—ಶೂರರೂ, ಸತ್ಯಸಂಧರೂ, ಧಾರ್ಮಿಕರೂ ಎನಿಸಿದ ಪಾಂಡವರು ನಮ್ಮ ಅರಮನೆಯಲ್ಲಿ ಗೂಢವಾದ ವೇಷದಿಂದವಾಸಮಾಡಿ ತಮ್ಮ ಪ್ರತಿಜ್ಞೆಯನ್ನು ಕಾಪಾಡಿದಕಾರಣ ನನ್ನ ವಂಶವು ಪಾವನವಾಯಿತೆಂದು ತಿಳಿಯುವೆನು. ನಾನೇ ಸುಕೃತಶಾಲಿಯು.

ಅಭಿಮನ್ಯು—ಏನು? ಈ ಪೂಜ್ಯರು ನನ್ನ ತಂದೆಯವರೇ? ಅದಕ್ಕಾಗಿಯೇ ನಾನೆಷ್ಟುಬಗೆಯಿಂದ ದೂಷಿಸಿದರೂ ಸಿಟ್ಟುಗೊಳ್ಳಲಿಲ್ಲ. ನನ್ನ ಕೋಪವು ಏರಿದಹಾಗೆಲ್ಲಾ ಇವರು ಹಾಸ್ಯದಿಂದಲೇ ನನ್ನನ್ನು ದೂಷಿಸತೊಡಗಿದರು. ಈ ದಿವಸವೇ ಸುದಿವಸವು. ನನ್ನ ಜನಕನನ್ನೂ, ಆತನ ಹಿರಿಯನನ್ನೂ ನಾನು ಸಂದರ್ಶಿಸಿದೆನಾಗಿ ನಮ್ಮ ದೊಡ್ಡಪ್ಪನಾದ ದುರ್ಯೋಧನನು ವಿಫಲಪ್ರಯತ್ನನಾಗಿ ಮಾನಭಂಗವನ್ನು ಪಡೆದು ಹಿಂದಿರುಗಿದರೂ ಗೋಗ್ರಹಣವು ನನಗೆ ಮಾತ್ರ ಸುಖದಲ್ಲಿ ಪರ್ಯವಸಾನವನ್ನು ಪಡೆಯಿತು. (ಭೀಮಸೇನನನ್ನು ಕುರಿತು) ಪಿತನೇ!

ನಾನು ನಿನ್ನನ್ನು ಇದುವರೆಗೆ ನಮಸ್ಕರಿಸದಿದ್ದುದು ನನ್ನ ಅಜ್ಞಾನಮೂಲಕವಾದ ದೋಷವು. ಆ ಅಪರಾಧವನ್ನು ಮನ್ನಿಸಬೇಕುವೆನು. ಪುತ್ರನ ಅಪರಾಧವನ್ನು ಕ್ಷಮಿಸಿ ಅನುಗ್ರಹಿಸುವುದು ಜನಕನ ಕರ್ತವ್ಯವಲ್ಲವೇ? (ಎಂದು ನಮಸ್ಕರಿಸುವನು.)

ಭೀಮ—ಬಾ. ಬಾ. ಪುತ್ರರತ್ನವೇ! ಬಾ. ತಂದೆಗೆ ಸಮಾನನೆನಿಸಿ ಬಾಳು.

ಅಭಿ—ಧನ್ಯನಾದೆನು. ಪರಮಾನುಗ್ರಹವು.

ಭೀಮ—ವತ್ಸಾ! ನಿಮ್ಮ ಹೆತ್ತಯ್ಯನನ್ನು ನಮಸ್ಕರಿಸು.

ಅಭಿ—ಜನಕನೇ ! ನಮಸ್ಕರಿಸುವೆನು.

ಅರ್ಜುನ—(ಅಕ್ಕರೆಯಿಂದ ತಕ್ಕೈಸಿ ಬಿಗಿದಪ್ಪಿ ಆನಂದಬಾಷ್ಪವನ್ನು ಸುರಿಸುತ್ತ) ಮಗೂ ! ವತ್ಸಾ ! ಅಭಿಮನ್ಯೋ ! ಬಾ. ಬಾ. ಆಹಾ ! ಪುತ್ರಸಮಾಗಮಸೌಖ್ಯವನ್ನು ಬಣ್ಣಿಸಲಾರೆನು. ಲೋಕದಲ್ಲಿ ಮನುಷ್ಯಜನ್ಮವೆತ್ತಿದುದಕ್ಕೆ ಇದಲ್ಲವೇ ಫಲವು ! ಮಕ್ಕಳನ್ನು ಮುದ್ದಾಡದವನೂ ಒಬ್ಬ ಮನುಷ್ಯನೇ ! ಈ ಭಾಗ್ಯವು ಹನ್ನೆರಡು ವರ್ಷಗಳಿಂದಲೂ ನನಗೆ ದೂರವಾಗಿದ್ದಿತು. ಈಗ ನನ್ನ ಸುಕೃತವಿಶೇಷವು ಪರಿಪಕ್ವವಾಯಿತೆಂದು ಭಾವಿಸುವೆನು. ಮಗೂ ; ಅಭಿಮನ್ಯೋ ! ವಿರಾಟೇಶ್ವರನನ್ನು ನಮಸ್ಕರಿಸು.

ಅಭಿ—ನಮಸ್ಕರಿಸುವೆನು.

ವಿರಾಟ—ವತ್ಸನೇ ! ಬಾ. ಬಾ. (ಎಂದು ತಬ್ಬಿಕೊಂಡು ಸಿಂಹಾಸನದ ಮೇಲೆ ಕೂಡಿಸಿ) ಯುಧಿಷ್ಠಿರನ ಧೈರ್ಯವನ್ನೂ, ಭೀಮನ ಬಲವನ್ನೂ, ಅರ್ಜುನನ ಸಾಹಸ ಚಮತ್ಕಾರಗಳನ್ನೂ, ಮಾದ್ರೀತನಯರ ಸೌಂದರ್ಯ ಮುಖವಿಕಾಸಗಳನ್ನೂ, ಶ್ರೀ ಕೃಷ್ಣನ ಜಗದಾಹ್ಲಾದಕರವೆನಿಸಿದ ಕೀರ್ತಿಯನ್ನೂ ಪಡೆದು ಸುಖವಾಗಿ ಬಾಳು. (ಆತ್ಮಗತಂ) ವತ್ಸೆಯಾದ ಉತ್ತರೆಯು ವಿವಾಹಯೋಗ್ಯವಾದ ವಯಸ್ಸಿನಲ್ಲಿರುವಳು. ತಕ್ಕ ವರನಿನ್ನೂ ದೊರೆಯಲಿಲ್ಲ. ನನ್ನ ಅಂತರಂಗವು ಕಳವಳಪಡುತ್ತಿರುವುದು. ಈಗ ಏನುಮಾಡಲಿ ? (ಯೋಚಿಸಿ) ಇರಲಿ. ಇದಕ್ಕೆ ತಕ್ಕ ಸಮಯವು ಒದವಿತು. ಇದೇ ಯೋಗ್ಯವಾದ ಪಾತ್ರವು. (ಪ್ರಕಾಶಂ) ಯಾರಲ್ಲಿ ?

ಭಟ—(ಪ್ರವೇಶಿಸಿ) ಮಹಾರಾಜನೆ ! ಏನಪ್ಪಣೆ ?

ವಿರಾಟ—ಉದಕವೆಲ್ಲಿ ?

ಭಟ—ಅಪ್ಪಣೆ. (ಒಳಹೊಕ್ಕು ಮರಳಿ ಪ್ರವೇಶಿಸಿ) ಮಹಾರಾಜನೆ ! ಸಿದ್ಧವಾಗಿರುವುದು.

ವಿರಾಟ—(ಕಲಶವನ್ನು ಕಯ್ಯಲ್ಲಿ ಹಿಡಿದು) ಅರ್ಜುನನೆ ! ಗೋಗ್ರಹಣ ಸಂರಂಭವನ್ನು ಗೆದ್ದು ಬಂದೆಯಾಗಿ ಪಾರಿತೋಷಕವನ್ನು ಕೊಟ್ಟ

ಋಣವನ್ನು ತೀರಿಸಲಾರೆನು. ಅದಕ್ಕೆ ಪ್ರತಿನಿಧಿಯಾಗಿ ವತ್ಸೆಯಾದ ಉತ್ತರೆಯನ್ನು ಪ್ರತಿಗ್ರಹಿಸು.

ಧರ್ಮಭೀಮರು—(ನಾಚಿಕೆಯಿಂದ) ತಲೆತಗ್ಗಿಸಿದೆವು. ಮಾತಿಗೆ ಅವಕಾಶವಿಲ್ಲ.

ಅರ್ಜುನ—(ಆತ್ಮಗತಂ) ಇದೇನು? ರಾಜನು ನನ್ನ ನಡವಳಿಕೆಯಲ್ಲಿ ಸಂಶಯಗೊಂಡಂತೆ ಕಾಣುವುದು. ಇರಲಿ. (ಪ್ರಕಾಶಂ) ರಾಜನೆ! ನಿನ್ನ ಅಂತಃಪುರವನ್ನು ಹೆತ್ತತಾಯಿಗಿಂತಲೂ ಅತಿಶಯವಾಗಿ ಅನನ್ಯಭಾವಭಕ್ತಿಯಿಂದ ಪೂಜಿಸುತ್ತಿದ್ದೆನು. ವತ್ಸೆಯಾದ ಉತ್ತರೆಯನ್ನು ಮಗಳಿಗಿಂತಲೂ ಅತಿಶಯವಾಗಿ ತಿಳಿದು ಬೋಧಿಸುತ್ತಿದ್ದೆನು. ಅದರಿಂದ ನಿನ್ನ ಕೋರಿಕೆಯನ್ನು ನಾನೇ ನಡೆಯಿಸಲು ಸಾಧ್ಯವಲ್ಲದಿದ್ದರೂ ನಿನ್ನ ಮನೋರಥವನ್ನು ಭಂಗಗೊಳಿಸಲು ಇಷ್ಟವಿಲ್ಲವಾಗಿ ನನ್ನ ಮಗನ ಸಲುವಾಗಿ ವತ್ಸೆಯನ್ನು ಪರಿಗ್ರಹಿಸುವೆನು.

ಧರ್ಮಭೀಮರು—ಭಲಾ! ಇದೀಗ ಉಚಿತವಾದುದು. ಇನ್ನು ತಲೆಯೆತ್ತುವೆವು.

ವಿರಾಟ—ನಿನ್ನ ಇಷ್ಟದಂತಾಗಲಿ.

ಯುದ್ಧಶೂರರೆನಿಸಿದ ಪಾಂಡವರ ನಡವಳಿಯು ಅತ್ಯದ್ಭುತವಾದುದು. ಈಮೂಲಕ ಅರ್ಜುನನು ಚಾರಿತ್ರವನ್ನು ಪ್ರಕಾಶಗೊಳಿಸಿದನಲ್ಲವೇ! ಗೂಢವಾಗಿ ವೇಷಾಂತರವನ್ನು ಧರಿಸಿ ಅಂತಃಪುರದಲ್ಲಿ ಒಂದು ವರ್ಷಕಾಲ ವಾಸಮಾಡುತ್ತಿದ್ದುದಕ್ಕೆ ಅರ್ಜುನನು ಸದೃಶವಾದ ಉಪಾಯವನ್ನೇ ಹುಡುಕಿದನು.

ಧರ್ಮರಾಜನೆ! ಈ ದಿನವೇ ತಿಥಿ ವಾರ ನಕ್ಷತ್ರಗಳು ಪ್ರಶಸ್ತವಾಗಿರುವುವು. ಇನ್ನು ವಿವಾಹ ಮಹೋತ್ಸವವು ನಡೆಯಲು ಅಭ್ಯಂತರವೇನು? ಈಗಲೇ ಮಂಗಳಮಹೋತ್ಸವವು ನಡೆಯಬಹುದಲ್ಲವೇ!

ಯುಧಿಷ್ಠಿರ—ಆಗಲಿ. ನಮ್ಮ ಅಜ್ಜನಬಳಿಗೆ ಲಗ್ನಪತ್ರಿಕೆಯನ್ನು ಕಳುಹಿಸುವ!

ವಿರಾಟ—ಹಾಗೆಯೇ ಆಗಲಿ. ನಿನ್ನ ಇಷ್ಟಬಂದಂತೆ ಮಾಡು. ಇದೇ ಸಂತೋಷವಾರ್ತೆಯನ್ನೇ ಅಂತಃಪುರಕ್ಕೂ ತಿಳಿಯಪಡಿಸುವ! ಬನ್ನಿರಿ. ಯುಧಿಷ್ಠಿರನೆ! ವೃಕೋದರನೆ! ಧನಂಜಯನೆ! ಸೌಭದ್ರನೆ! ವತ್ಸಾ! ಉತ್ತರಾ! ಬನ್ನಿರಿ. ಎಲ್ಲರೂ ಅಂತಃಪುರವನ್ನು ಸೇರುವ.

ಯುಧಿಷ್ಠಿರ—ಒಳ್ಳೆಯದು. ಆಗಬಹುದು. (ಎಂದೆಲ್ಲರೂ ತೆರಳುವರು.)

ಇಂತಿದು ಎರಡನೆಯ ಅಂಕವು.

---

## ಮೂರನೆಯ ಅಂಕವು.

---

ಸಾರಥಿ—(ಪ್ರವೇಶಿಸಿ) ಕ್ಷತ್ರಾಚಾರ್ಯನೆನಿಸಿದ ದ್ರೋಣನೇ ಮುಂತಾದವರಿಗೂ, ಮಿಕ್ಕ ಕ್ಷತ್ರಿಯರಿಗೂ ಬೇಗನೆ ತಿಳಿಯಪಡಿಸಿರಿ. ಸಾವಕಾಶಮಾಡಬೇಡಿರಿ.—

"ನಾರಾಯಣನ ಚಕ್ರಾಯುಧವನ್ನೂ ಲಕ್ಷ್ಯಮಾಡದೆ, ಯಾವಾಗಲೋ ದೇಶಭ್ರಷ್ಟರೆನಿಸಿ ಕಾಡುಪಾಲಾಗಿ ನಾವಮಾನಪೇಕ್ಷಿತರಾದ ಪಾಂಡುನಂದನರನ್ನು ತಿರಸ್ಕರಿಸಿ, ಅಭಿಮನ್ಯುವನ್ನು ಕೊಂದರಲ್ಲಾ ಪಾಪಿಗಳು! ಕಯ್ಯಲ್ಲಿ ಬಿಲ್ಲನ್ನು ಹಿಡಿದ ನೂರುಮಂದಿ ಕೌರವರೂ ಭೂಮಂಡಲದ ಎಲ್ಲದೆಸೆಯ ಅರಸರೂ, ಭೀಷ್ಮ, ದ್ರೋಣ ಕೃಪ ಮುಂತಾದ ಧನುರ್ವಿದ್ಯಾವಿಶಾರದರೂ ಸೇರಿಹೋಗಿದ್ದರೂ ಆ ಒಬ್ಬ ಹುಡುಗನನ್ನು ಬದುಕಿಸದೇ ಹೋದರಲ್ಲಾ! ಛೀ, ಛೀ, ಇವರಿಗೂ ಶೌರ್ಯವು ಒಪ್ಪುವುದೇ! ನಾಚಿಕೆಯಿಲ್ಲವೇ? ಇವರೂ ವೀರರೆನ್ನಿಸಲು ತಕ್ಕವರೇ?" ಎಂದು.

(ಭೀಷ್ಮದ್ರೋಣರ ಪ್ರವೇಶ.)

ದ್ರೋಣ—ಸಾರಥಿಯೇ! ಹೇಳು. ಹೇಳು. ಬೇಗನೆ ಹೇಳು.

ಯುದ್ಧ ದುರ್ಮದನಾದ ನನ್ನಶಿಷ್ಯತನಯನನ್ನು ಕೊಂಡುಯ್ದ

ಸಾಹಸಿಗನಾದರೂ ಯಾರು ? ಮೊದಲು ನನ್ನ ಬಾಣಗಳೊಂದಿಗೆ ಹೋರಾಡಿ ಮರಳಿ ದೇವತೆಗಳೊಡನೆ ಹೋರಾಡುವುದಕ್ಕೆ ಬಯಸಿರುವ ವೀರನಾವನು ? ಅಂತಹ ಪುರುಷಶ್ರೇಷ್ಠನಾವನು ? ಅವನ ಅಸ್ತ್ರವಾವುದು ? ಅವನ ಬಲವು ಎಷ್ಟರಮಟ್ಟಿನದು ? ಮಹಾಬಲಶಾಲಿಗಳಾದ ದೂತರಂತೆ ನನ್ನ ಬಾಣಗಳನ್ನು ಕಳುಹಿಸಿ ವತ್ಸನಾದ ಅಭಿಮನ್ಯುವನ್ನು ಕರೆಯಿಸುವೆನು.

ಭೀಷ್ಮ—ಸಾರಥಿಯೆ ! ಅದರ ಸಮಾಚಾರವೇನು ? ಹೇಳು. ಅಭಿಮನ್ಯುವು ನಮ್ಮ ಹಿಂದೆಯೇ ಹೊರಟುಬಾರದೆ ರಣರಂಗದಲ್ಲಿ ಸಾವಕಾಶಮಾಡಲು ಕಾರಣವೇನು ? ರಥವೇನಾದರೂ ಮುರಿದು ಹೋಯಿತೇ ? ಇಲ್ಲವೆ ಕುದುರೆಗಳು ಗಾಯಪಟ್ಟು ನಡೆಯಲಾರದೆ ಹೋದುವೇ ? ಇಂತಹ ಸಂದರ್ಭವೇನಾದರೂ ಬದವಿದ ಕೂಡಲೇ ನಮಗೆ ತಿಳಿಸಬಾರದಾಗಿದ್ದಿತೇ ? ಅವನಿಗೆ ಇನ್ನೂ ಅನುಭವವಿಲ್ಲದಿರುವ ಕಾರಣ ಉಪೇಕ್ಷೆಯಿಂದ ಇದ್ದು ಈರೀತಿ ಶತ್ರು ವೀರನ ಕೈಗೆ ಸಿಕ್ಕಿಬಿದ್ದನೇ ? ಅಥವಾ ಎಳೆಪ್ರಾಯದವನಾದುದರಿಂದ "ಹೋದರೆ ಹೋಗುವ, ಈಗ ಆತುರವೇನು ?" ಎಂದು ಸಾವಕಾಶಮಾಡುತ್ತಿರುವಲ್ಲಿ ಮದ್ದಾನೆಯನ್ನು ಹಿಡಿಯಲು ಪ್ರಯತ್ನಪಟ್ಟು, ಸಾಧ್ಯವಾಗದೆ ಆನೆಯ ಹಿಂಡು ಹೊರಟುಹೋದ ಬಳಿಕ ಬಾಲಚಾಪಲದಿಂದ ಅಲ್ಲಲ್ಲಿ ತಿರುಗಾಡುತ್ತ ಸಾವಕಾಶವಾಗ ನಡೆಯುತ್ತಾ ಹಿಂದುಳಿದ ಮರಿಯಾನೆಯನ್ನು ಹಿಡಿಯುವ ರೀತಿಯಿಂದೆ, ನಾವೆಲ್ಲರೂ ಹಿಂತಿರುಗಿ ದೂರವಾದ ಬಳಿಕ ಅಭಿಮನ್ಯುವನ್ನು ಹಿಡಿಯುವುದಕ್ಕೆ ಹೊಂಚಿಕೊಂಡಿದ್ದವನಾರು ?

(ದುರ್ಯೋಧನ, ಕರ್ಣ, ಶಕುನಿಯರ ಪ್ರವೇಶ.)

ದುರ್ಯೋ—ಸೂತನೇ ! ಅಭಿಮನ್ಯುವನ್ನು ಕರೆದುಕೊಂಡು ಹೋದವನಾರು ? ಹೇಳು. ನಾನೇ ಆ ಬಂಧನವನ್ನು ಬಿಡಿಸುವೆನು. ಏಕೆಂದರೆ ನನಗೂ ಇವನ ತಂದೆಗಳಿಗೂ ದಾಯಾದ ಮತ್ಸರವು ಬಹಳ ಕಾಲದಿಂದಲೂ ಇರುವುದು. ಈಗ ಮತ್ತಷ್ಟು ಅಭಿವೃದ್ಧಿಯನ್ನು ಪಡೆದಿರುವುದು. ಇಂತಿರುವಲ್ಲಿ ಕುಮಾರನಾದ ಅಭಿಮನ್ಯುವು

ನಮ್ಮ ಹಿಂದೆ ಯುದ್ಧ ಮಾಡಲು ನಮಗೇ ಬತ್ತಾಸೆಯಾಗಿ ಬಂದು ನೂರಾರು ಮಂದಿಯನ್ನು ಕೊಂದನಲ್ಲವೇ? ಈಗ ಜನಗಳು ಧಾರಾಳವಾಗಿ ನನ್ನ ಮೇಲೆ ಅಪರಾಧವನ್ನು ಹೊರಿಸುವರೆನ್ನುವುದಕ್ಕೆ ಸಂದೇಹವೇ ಇಲ್ಲ. ಆದರೆಮಾತ್ರ ನಾನು ಅದಕ್ಕೆ ಒಳಪಡತಕ್ಕವನಲ್ಲ. ಹೇಗಾದರೂ ಮಾಡಿ ಅವನನ್ನು ಬಿಡಿಸಿಕೊಂಡೇ ಬಂದು ತೀರಬೇಕು. ಅವನು ನನ್ನ ಮಗನು. ಪಾಂಡವರ ಮಗನೆಂಬುದು ಹಾಗಿರಲಿ. ಅದು ಮುಂದಿನ ಮಾತು. ನಮಗೂ ಪಾಂಡವರಿಗೂ ಕುಲವಿರೋಧವು ಇದ್ದ ಮಾತ್ರದಿಂದಲೇ ಹುಡುಗರ ಅಪರಾಧವೇನು? ಬಾಲರು ನಿರಪರಾಧಿಗಳಲ್ಲವೇ?

ಕರ್ಣ—ಸ್ನೇಹಧರ್ಮಕ್ಕೆ ಅನುರೂಪವಾಗಿ ಹೇಳಿರುವೆ. ಭಲಾ! ಗಾಂಧಾರೀತನಯನೇ! ನಮ್ಮವನೆಂತಲೂ ಅವನನ್ನು ಬಿಡಿಸಕೆಲಸವಿಲ್ಲ. ಹುಡುಗನೆಂತಲೂ ಬೇಡ. ಅವೆರಡೂ ಹಾಗಿರಲಿ. ನಿನ್ನ ಪ್ರಿಯನನ್ನು ಬಯಸಿ ರಣಮುಖದಲ್ಲಿ ಹಗೆಗಳ ಕೈಗೆ ಸಿಕ್ಕಿಬಿದ್ದು ವಿಪತ್ತಿಗೆ ಗುರಿಯಾಗಿರುವನು. ಆದಕಾರಣ ನೀನು ಹೇಗಾದರೂ ಹಾಡುಪಟ್ಟು ಅಭಿಮನ್ಯುವನ್ನು ಬಿಡಿಸುವುದು ಯುಕ್ತವಾದುದು. ನಾವು ಈಗ ಅಭಿಮನ್ಯುವನ್ನು ಬಿಡಿಸಲಾರದೆಹೋದರೆ ಶಸ್ತ್ರಸನ್ಯಾಸವನ್ನು ಮಾಡಿ ನಾರುಮಡಿಗಳನ್ನು ಧರಿಸುವುದೇ ಲೇಸು.

ಶಕುನಿ—ಸುಭದ್ರಾತನಯನಿಗೇನು ಕಡಮೆ! ನೀನೊಬ್ಬನೇನೋ ಅವನ ಸಂರಕ್ಷಕನು? ಅವನು ಬಿಡುಗಡೆ ಹೊಂದಿರುವನೆಂತಲೇ ದೃಢವಾಗಿರು.

ಇವನು ಅರ್ಜುನನ ಮಗನೆಂದು ತಿಳಿದ ಕೂಡಲೇ ವಿರಾಟನು ತಾನಾಗಿಯೇ ಬಿಟ್ಟರೂ ಬಿಡಬಹುದು. ಅದೂ ಇಲ್ಲದಿದ್ದರೆ ಆ ದಾಮೋದರನ ಕಡೆ ದೃಷ್ಟಿಯಿರಿಸಿ "ಹೋಗಲಿ, ಪಾಪ! ಹುಡುಗ; ಏನೂ ಅರಿಯದವನು. ಇಷ್ಟರಮೇಲೆ ಯುದ್ಧರಂಗದಲ್ಲಿ ಸೋತಿರುವನು. ಇವನು ನಮ್ಮನ್ನೇನು ಮಾಡಬಲ್ಲನು?" ಎಂದು ಕನಿಕರದಿಂದಲೋ, ಇಲ್ಲವೋ ತಿರಸ್ಕಾರಬುದ್ಧಿಯಿಂದಲೋ ಬಿಟ್ಟರೂ ಬಿಡಬಹುದು. ಪ್ರಲಂಬನೆಂಬ ರಕ್ಕಸನ ಸೊಕ್ಕನ್ನು

ಮುರಿದ, ಕ್ರೋಧಾಂಧನಾದ ಬಲರಾಮನ ನೇಗಲಿಗೆ ಹೆದರಿಯಾ ದರೂ ಬಿಡುಗಡೆ ಮಾಡಬಹುದು. ಇಲ್ಲದಿದ್ದರೆ ಬಲಾಧಿಕನಾದ ಭೀಮಸೇನನು ಕೊಬ್ಬಿದ ಹಗೆಗಳನ್ನು ಒಕ್ಕಲಿಕ್ಕಿ ಅವನನ್ನು ಇಲ್ಲಿಗೆ ಕರೆತಂದರೂ ಕರೆತರಬಹುದು.

ಇದಕ್ಕಾಗಿ ನೀವೇಕೆ ವ್ಯರ್ಥವಾಗಿ ಚಿಂತಿಸುವಿರಿ? ಸಾಕು. ಸುಮ್ಮನಿರಿ.

ದ್ರೋಣ—ಸೂತನೆ! ಅವನನ್ನು ಹಿಡಿದ ಬಗೆಯಾದರೂ ಯಾವುದು? ಹೇಳು ಅವನ ರಥವೇನಾದರೂ ಚದರಿ ಬಿರಿದುಹೋಯಿತೇ? ಕುದುರೆಗಳೇನಾದರೂ ಬೆದರಿದುವೇ? ರಥದ ಗಾಲಿಗಳೇನಾದರೂ ನೆಲದಲ್ಲಿ ಹೂತುಕೊಂಡುವೇ? ಬತ್ತಳಿಕೆಯಲ್ಲಿ ಬಾಣಗಳು ಮುಗಿದುಹೋಗಿದ್ದುವೇ? ಸಾರಥಿಯಂತೂ ನೀನೇ ಇದ್ದೆಯಷ್ಟೆ. ಬಿಲ್ಲಿನ ಹೆದೆಯು ಏನಾದರೂ ಕತ್ತರಿಸಿಹೋಯಿತೇ? ಸಾಮಾನ್ಯ ವಾಗಿ ರಥಿಕರಿಗೆ ಇವೆಲ್ಲವೂ ದೈವಿಕವಾಗಿ ಸಂಭವಿಸುವುದೂ ಉಂಟು. ಇಷ್ಟರಮೇಲೆ ಹಗೆಗಳ ಬಾಣಗಳೇನಾದರೂ ಅವನ ಜಾಗರೂಕತೆಯನ್ನು ಕಸುಗೊಂಡಿದ್ದುವೇ? ಆದರೆ ಅವನು ಹುಡು ಗನಾದರೂ ಮಹಾನಿಪುಣನು. ಚೆನ್ನಾಗಿ ಶಿಕ್ಷಿತನಾದವನು. ಇಂ ತಹ ಅಪಾಯಗಳಿಗೆಲ್ಲಾ ಧೈರ್ಯಗುಂದುವವನೂ ಅಲ್ಲ. ಸಾಮಾ ನ್ಯವಾಗಿ ಈ ವಿಧವಾದ ಅಪಾಯಗಳೇ ಅವನಿಗೆ ಒದಗಲಾರವು. ಒದವಿದರೂ ನಿಮಿಷಮಾತ್ರದಲ್ಲಿ ಸರಿಪಡಿಸಿಕೊಳ್ಳಲು ಶಕ್ತನಲ್ಲವೇ? ಅವನು?

ಸಾರಥಿ—ಆಯುಷ್ಮಂತನೆ! ಪುರುಷರೂಪವನ್ನು ತಳೆದ ಧನುರ್ವೇದವ ಲ್ಲವೇ ಅಭಿಮನ್ಯುವು! ಆಯುಷ್ಮಂತನಿಗೂ ಈ ಸಮಾಚಾರವು ತಿಳಿಯದೇ?

ನೀನು ಹೇಳಿದ ದೋಷಗಳೊಂದೂ ಸಂಭವಿಸಲಿಲ್ಲ. ರಥದ ತುಂಬ ಬಾಣಗಳು ಹೇರಳವಾಗಿದ್ದುವು. ನನ್ನ ರಥವಾದರೋ ಕೊಳ್ಳಿಯ ಚಕ್ರದಂತೆ ತಿರುಗುತ್ತಿದ್ದಿತು. ಇಂತಿದ್ದರೂ ಒಬ್ಬ ಕಾಲಾಳು ಅವನನ್ನು ಹಿಡಿದುಬಿಟ್ಟನಲ್ಲಾ! ಇದೇ ನನಗೆ ಆಶ್ಚರ್ಯವು.

ಎಲ್ಲರೂ—ಏನು? ಏನು? ಕಾಲಾಳೇ ಅವನನ್ನು ಹಿಡಿದವನುಳ ಆದರೆ ಅವನೆಂತಹಕಾಲಾಳು? ಅವನನ್ನು ಗುರುತಿಸಿ ಹೇಳ ಬಲ್ಲೆಯಾ?

ಸಾರಥಿ—ಅಬ್ಬಬ್ಬಾ! ಅವನ ರೂಪವನ್ನಾಗಲಿ, ಪರಾಕ್ರಮವನ್ನಾಗಲಿ ನಾನೇನು ಹೇಳಬಲ್ಲೆನು? ಅವನೆಲ್ಲಿಯು ಮನುಷ್ಯನೊ ನಾನರಿಯೆ.

ಭೀಷ್ಮ—ರೂಪದ ಮಾತು ಹಾಗಿರಲಿ. ಅದು ಸ್ತ್ರೀಯ ವಿಷಯಕ ವಾದುದು. ಪುರುಷರನ್ನು ವರ್ಣಿಸುವಾಗ ಪರಾಕ್ರಮವೇ ಮುಖ್ಯ ವಾದುದು. ಆದಕಾರಣ ಅವನ ಪರಾಕ್ರಮವನ್ನು ಹೇಳು. ರೂಪವನ್ನು ಕುರಿತು ನಮಗೇನು?

ಸೂತ—ಆಯುಷ್ಮಂತನೇ! ಲಾಲಿಸು.

ದುರ್ಯೋಧನ—ಎಲಾ! ಸುಮ್ಮನೆ ಪ್ರೌಢರೀತಿಯಿಂದ ಬಾಯಿಗೆ ಬಂದ ಹಾಗೆಲ್ಲಾ ಯಾವನೋ ಒಬ್ಬನನ್ನು ಹೊಗಳುತ್ತಿರುವೆಯಲ್ಲಾ! ಸಾಕು. ಸಾಕು. ಅವನು ಪರಾಕ್ರಮದಲ್ಲಿ ಮಹಾಬಲನೆನಿಸಿದ ವಾಯುದೇವನೇ ಆಗಿರಕೂಡದೇಕೆ? ಯಾರಾದರೇನು? ನನ ಗೇನೂ ಭಯವಿಲ್ಲ. ಹೇಳು.

ಸೂತ—ಮಹಾರಾಜನೆ! ಅವಧರಿಸು. ಅವನು—

ವೇಗವಾಗಿ ಕುದುರೆಗಳನ್ನು ಹಾರಿ ಕುಮಾರನ ಬಿಲ್ಲನ್ನು ಕೈಯಿಂದ ಹಿಡಿದಕೂಡಲೇ ಕುದುರೆಗಳು ಕತ್ತು ಚಾಚಿ ಕುಗ್ಗಿ ನಿಂತುಬಿಟ್ಟುವು ರಥವು ಇದ್ದ ಕಡೆಯಲ್ಲಿಯೇ ಅತ್ತಿತ್ತ ಅಲುಗದೆ ನಿಂತಿತು.

ಭೀಷ್ಮ—ಹಾಗಾದರೆ ನಿಮ್ಮ ಆಯುಧಗಳನ್ನು ಬಿಸಾಡಿರಿ. ಅವುಗಳ ಕಾರ್ಯವಿಲ್ಲ.

ಎಲ್ಲರೂ—ಕಾರಣವೇನು?

ಭೀಷ್ಮ—ಕುದುರೆಗಳ ಬಲವು ಕುಗ್ಗಿ, ರಥವು ಅಲುಗದೆ ನಿಂತಿತೆಂ ದಮೇಲೆ ಅವನು ವೃಕೋದರನ ತೊಡೆಯಮೇಲೆ ಕುಳಿತಿರು

ವನೆಂದು ತಿಳಿಯಿರಿ. ಹಿಂದೆ ಜಯದ್ರಥನು ದ್ರೌಪದಿಯನ್ನು ಅಪಹರಿಸಿಕೊಂಡು ಬರುತ್ತಿದ್ದ ಕಾಲದಲ್ಲಿ ಭೀಮನು ಕಾಲಾಳಾಗಿ ನಿಂತೇ ಜಯದ್ರಥನ ಸೊಕ್ಕನ್ನು ಮುರಿದು ಮಾನಭಂಗ ಪಡಿಸಿದ ನಲ್ಲವೇ ?

ದ್ರೋಣ—ಭಲಾ ! ಭಲಾ ! ಇದೀಗ ಒಪ್ಪತಕ್ಕ ಮಾತು. ಗಾಂಗೇಯನೇ ! ಯುಕ್ತವಾದ ಮಾತನ್ನೇ ಹೇಳಿರುವೆ. ಚಿಕ್ಕಂದಿನಿಂದಲೂ ಅವನು ನನ್ನ ಹತ್ತಿರ ವಿದ್ಯಾಭ್ಯಾಸಕ್ಕೆ ಆರಂಭಿಸಿದ ಮೊದಲು ನಾನು ಅವನ ಬಲವನ್ನು ಚೆನ್ನಾಗಿ ಬಲ್ಲೆನು. ಗರಡಿಯ ಮನೆಯಲ್ಲಾದರೋ—

ನಾವು ಕಿವಿಯವರೆಗೂ ಸೆಳೆದು ನನ್ನ ಬಲವನ್ನೆಲ್ಲಾ ತೋರಿ ಬಾಣವನ್ನು ಬಿಟ್ಟರೆ ಅವನು ತಲೆಯನ್ನು ಅಲ್ಲಾಡಿಸುತ್ತಾ ಆ ಬಾಣವು ತನ್ನ ಹತ್ತಿರ ಬರುವುದಕ್ಕೆ ಮುಂಚಿತವಾಗಿಯೇ, ಆ ಬಾಣಕ್ಕಿಂತಲೂ ವೇಗವಾಗಿ ಮುಂದುವರಿದು ಅದನ್ನು ಕೈಯ್ಯಲ್ಲಿ ಹಿಡಿಯುತ್ತಿದ್ದನು.

ಶಕುನಿ—ಛೀ ! ಛೀ ! ನಗೆಗೇಡು. ಯಾರಾದರೂ ಕೇಳಿದರೆ ನಗುವರಲ್ಲಾ ! ಎಂಬ ಯೋಚನೆಯೂ ಇಲ್ಲದೆ ಸುಮ್ಮನೆ ಬಾಯಿಗೆ ಬಂದಂತೆ ಮಾತನಾಡಿದರಾಯಿತೇ ? ಆಚಾರ್ಯರೆ ! ನಿಮ್ಮನ್ನು ಒಂದೇ ಒಂದು ಮಾತು ಕೇಳಬೇಕು. ಲೋಕದಲ್ಲಿ ಬಲಿಶಾಲಿಯು ಬೇರೊಬ್ಬನು ಯಾವನೂ ಇಲ್ಲವೋ ? ನಿಮ್ಮ ಇಷ್ಟದಂತೆ ನಿಮಗೆ ಆಪ್ತರಾದವರನ್ನೇ ಬಾರಿಬಾರಿಗೂ ಹೊಗಳುವುದೇ ನಿಮ್ಮ ಕೆಲಸವೋ ? ಲೋಕದಲ್ಲಿ ಎಲ್ಲಿ ನೋಡಿದರೂ ಯಾವ ವಿಷಯದಲ್ಲಿಯೂ ಪಾಂಡವರೇನೋ ನಿಮ್ಮ ಕಣ್ಣಿಗೆ ಕಾಣಬರುವುದು ? ಮತ್ತಾರೂ ಕಾಣುವುದೇ ಇಲ್ಲವಲ್ಲವೇ ?

ಭೀಷ್ಮ—ಗಾಂಧಾರರಾಜನೇ ! ನಾವು ಹೇಳುವುದೆಲ್ಲಾ ಅನುಮಾನದ ಮಾತೇ ಹೊರತು “ ಹೀಗೆಯೇಸರಿ ” ಎಂದು ಸ್ಥಾಪಿಸಲಿಲ್ಲವಲ್ಲ ಇದಕ್ಕೇಕೆ ನಿನಗೆ ಇಷ್ಟೊಂದು ಆಗ್ರಹ ? ಆದರೂ ಕೇಳು.

ಯುದ್ಧವು ಒದವಿತೆಂದರೆ ಎಷ್ಟೋಬಗೆಯಾದ ಆಯುಧಗಳನ್ನು ಸವರಿಕೊಂಡು, ಶಸ್ತ್ರಗಳನ್ನೂ, ಬಿಲ್ಲುಗಳನ್ನೂ ರಥದಲ್ಲಿ ತುಂಬಿ ಸಾರಥಿಯನ್ನೂ ಕುದುರೆಗಳನ್ನೂ ರಥವನ್ನೂ ಚೆನ್ನಾಗಿ ಪರೀಕ್ಷಿಸಿ, ಶಕುನವನ್ನು ನೋಡಿ ಹೊರಡುವುದು ನಮ್ಮ ನಡೆವಳಿಯಾಗಿರುವುದು. ಯಾವುದೊಂದು ಸಲಕರಣೆಯೂ ಇಲ್ಲದೆ ಇದ್ದಕ್ಕಿದ್ದಹಾಗೆಯೇ ಯಾರ ಹಂಗೂ ಆಸರೆಯೂ ಇಲ್ಲದೆ ಮುಂದುವರಿದು ಹೋರಾಡುವುದು ಭೀಮನಿಗೂ ಬಲರಾಮನಿಗೂ ಸಹಜವಾಗಿರುವುದು. ಇವರಿಗೆ ಸಮಾನನಾದ ಮತ್ತೊಬ್ಬನನ್ನು ಹೇಳು ನೋಡುವ!

ಶಕುನಿ—ಸಾಹಸಪ್ರಿಯರೆನಿಸಿದ ನಾವು ಇಷ್ಟುಮಂದಿಯೂ ನಿನ್ನೆಯ ದಿವಸದ ಯುದ್ಧದಲ್ಲಿ ಒಬ್ಬೊಂಟಿಗನಾದ ಆ ಉತ್ತರನಕೈಗೆ ಸಿಲುಕಿ ನರಳಿ ಹಲ್ಲುಕಿರಿದುಬಂದೆವು. ಎಲ್ಲಿ? ಆ ಉತ್ತರನ ಮುಂದೆ ನಿಂತು ಯುದ್ಧಮಾಡಲಿ! ಆಗಲಲ್ಲವೇ ಪಾಂಡವರ ಬೆಡಗು ಹೊರಬೀಳುವುದು? ನೀವು ಅದನ್ನೂ ಅಪಲಪಿಸುತ್ತಿರುವಿರಿ. ಅವನು ಉತ್ತರನೇ ಅಲ್ಲವಂತೆ! ಉತ್ತರನಿಗೆ ಅಷ್ಟೊಂದು ಸಾಹಸವಿಲ್ಲವಂತೆ! ಅವನೂ ಅರ್ಜುನನೇ ಅಂತೆ! ಬೇರೊಬ್ಬನೇ ಇಲ್ಲವಂತೆ! ಮಾತುಮಾತಿಗೂ ಭೀಮ. ಇಲ್ಲವಾದರೆ ಧನಂಜಯ. ಈಗ ಮೂರನೆಯವನೊಬ್ಬ ಬಲರಾಮ. ತೆಗೆ. ತೆಗೆ. ಅವನೊಬ್ಬ ಹೆಂಡಕುಡುಕ. ಅವನ ಸುದ್ದಿಯೂ ಬಂದು ಮಾತೆಂದು ನನ್ನ ಮುಂದೆ ಹೇಳಬಂದಿರಾ?

ದ್ರೋಣ—ಅಯ್ಯಾ! ಗಾಂಧಾರರಾಜನೆ! ಈ ವಿಷಯದಲ್ಲಿಯೂ ನಿನಗೆ ಸಂದೇಹವೇ? ಹಾಗಾದರೆ ಅವನು ಅರ್ಜುನನಲ್ಲ. ಉತ್ತರನೇ ಅಲ್ಲವೇ ಇಷ್ಟೊಂದು ಪರಾಕ್ರಮವನ್ನು ತೋರಿದನೆಂದು ಹೇಳುವೆ? ಉತ್ತರನೂ ಅಂತಹ ಬಿಲ್ಲನ್ನು ಸೆಳೆಯಬಲ್ಲನೇ? ಅವನೂ ಸಿಡಿಲಿನಂತೆ ಭಯಂಕರವಾದ ಧ್ವನಿಯನ್ನು ಬಣ ಬಿದಿರುದಬ್ಬೆಗೆ ಬಿಗಿಸಿದ ಒಂದು ಬಣ ನರದಿಂದ ಉಂಟುಮಾಡಬಲ್ಲನೋ? ಉತ್ತರನ ಭಾಣವೇಗದಿಂದಲೂ ಸೂರ್ಯನು ತನ್ನ ಬಿಸಿಲನ್ನು ಅಡಗಿಸಿ ಮುಹೂ

ರ್ತಕಾಲ ಭಯದಿಂದ ಅಸ್ತಂಗತನಾಗುವನಲ್ಲವೇ? ಉತ್ತರನೂ ಅಂತಹ ಶೂರನೋ? ಇರಬಹುದು. ನಾವೇನುಬಲ್ಲೆವು? ನೀನು ಶಸ್ತ್ರವಿದ್ಯಾವಿಶಾರದನಲ್ಲವೇ? ಆ ಸಂದರ್ಭವನ್ನೆಲ್ಲಾ ನೀನು ಚನ್ನಾಗಿ ಬಲ್ಲೆಯಲ್ಲವೆ?

ಭೀಷ್ಮ—ಗಾಂಧಾರೀತನಯನೆ! ಸ್ಪಷ್ಟವಾಗಿಯಲ್ಲವೇ ಹೇಳುತ್ತಿರುವೆನು? ನೀನೂ ಬಲ್ಲೆಯಷ್ಟೆ?
ಬಾಣದ ತುದಿಯಲ್ಲಿದ್ದ ಪುಕ್ಕದಬಳಿ "ಅರ್ಜುನ" ಎಂಬ ಅಕ್ಷರಗಳು ಕೆತ್ತಿರಲಿಲ್ಲವೇ? ಅಗ್ನಿಪುರುಷನ ನಾಲಗೆಗಳಂತೆ ಬಿಲ್ಲಿನ ಮೂಲಕ ಅವು ತಂಡೋಪತಂಡವಾಗಿ ಹೊರಟುಬಂದುದನ್ನು ನೀನೂ ಕಣ್ಣಾರ ಕಂಡೆಯಷ್ಟೆ? ಈಗ ನಿಷ್ಪಕ್ಷಪಾತವಾಗಿ ಹೇಳು. ಬಿಲ್ಲನ್ನು ಸೆಳೆದು ಧ್ವನಿಮಾಡಿ ಯುದ್ಧಮಾಡಿದವನಾರು? ಅರ್ಜುನನೋ? ಇಲ್ಲವೇ ಉತ್ತರನೋ?

ಸೂತ—(ಒಂದು ಬಾಣವನ್ನು ಕೈಯಲ್ಲಿ ಹಿಡಿದು ಭೀಷ್ಮನನ್ನು ನೋಡಿ) ಆಯುಷ್ಮಂತನೆ! ಜಯಶೀಲನಾಗು. ನೀನಲ್ಲವೇ ಸತ್ಯಸಂಧನು! ಇನ್ನಾದರೂ ಈ ಜಗಳವನ್ನು ಇಲ್ಲಿಗೆ ನಿಲ್ಲಿಸಿ ಶಾಂತಿಕರ್ಮವನ್ನು ಅನುಷ್ಠಾನ ಮಾಡು.

ಭೀಷ್ಮ—ಸೂತನೆ! ಕಾರಣವೇನು?

ಸೂತ—ಇಷ್ಟುಮಾತೇಕೆ? ಬಾಣದಿಂದ ಬಿರಿದ ನಿನ್ನ ಧ್ವಜಪಟದಲ್ಲಿ ಇದಾವುದೋ ಒಂದು ಬಾಣವು ತಗುಲಿಕೊಂಡಿದ್ದಿತು. ಮೊದಲೇ ಇದನ್ನು ನೋಡಿದ್ದರೆ ಯೋಗ್ಯವಾಗಿರುತ್ತಿದ್ದಿತು. ಇಷ್ಟೊಂದು ಮಾತಿಗೆ ಅವಕಾಶವೇ ಇರುತ್ತಿರಲಿಲ್ಲ. "ಈ ಬಾಣವು ಯಾರದು?" ಎಂಬುದನ್ನು ಪರೀಕ್ಷಿಸಿ ನೋಡು. ಬಾಣದ ತುದಿಯಲ್ಲಿ ಅಕ್ಷರಗಳು ಕೆತ್ತಿರುವುವು.

ಭೀಷ್ಮ—ಎಲ್ಲಿ! ಇತ್ತ ತಾ. ನೋಡುವೆನು. (ಕೈಗೆ ತೆಗೆದು ನೋಡಿ) ವತ್ಸಾ, ಗಾಂಧಾರರಾಜಾ! ಮುದಿತನದಿಂದ ದೃಷ್ಟಿಯು ಚೆನ್ನಾಗಿ ಕಾಣದು. ನೀನಿದನ್ನು ಓದಿನೋಡು.

ಶಕುನಿ—(ತೆಗೆದು ಓದಿನೋಡಿ) ಅರ್ಜುನನದು. (ಎಂದು ಬಿಸುಡುವನು. ಅದು ದ್ರೋಣನ ಕಾಲಿಗೆ ತಗುಲಿ ಬೀಳುವುದು.)

ದ್ರೋಣ—(ತೆಗೆದುಕೊಂಡು) ಬಾ. ಬಾ! ವತ್ಸಾ, ಅರ್ಜುನಾ! ಬಾ. ನನ್ನ ಶಿಷ್ಯನಾದ ಅರ್ಜುನನು ತನ್ನ ತಾತನಾದ ಭೀಷ್ಮನನ್ನು ನಮಸ್ಕರಿಸುವುದಕ್ಕಾಗಿ ಈ ಬಾಣವನ್ನು ಕಳುಹಿಸಿರುವನು. ಮೊದಲು ಭೀಷ್ಮನ ಕಾಲಿಗೆ ಎರಗಿ, ಬಳಿಕ ಕ್ರಮವಾಗಿ ನನ್ನ ಕಾಲಿಗೆ ಎರಗಲು ನನ್ನ ಕಾಲಿನಮೇಲೆ ಬಿದ್ದಿತು.

ಶಕುನಿ—ಸಾಕು. ಸಾಕು. ಈ ಬಾಣದ ಮೇಲೆ ಅರ್ಜುನನ ಹೆಸರಿದ್ದ ಮಾತ್ರಕ್ಕೇ ಇದೊಂದು ದೊಡ್ಡ ಭರವಸೆಯೋ? ಎಷ್ಟುಮಾತ್ರವೂ ನಂಬತಕ್ಕುದಲ್ಲ. ಅವನೊಬ್ಬನೇನೋ ಅರ್ಜುನನೆಂಬುವನು! ಅರ್ಜುನನೆಂಬ ಹೆಸರಿನ ಮತ್ತೊಬ್ಬ ಯೋಧನು ಇರಕೂಡದೇಕೆ? ಅವನು ಈ ಬಾಣವನ್ನು ಬಿಟ್ಟಿರಬಹುದು. ಬಂದುವೇಳೆ ಉತ್ತರನೇ ಆ ಹೆಸರನ್ನು ಬರೆದಿರಬಹುದು. ಎಲ್ಲಿ? ಪ್ರಕಾಶವಾಗಿ ನೋಡುವ.

ದುರ್ಯೋಧನ—ಅವರಿಗೆ ರಾಜ್ಯವನ್ನು ಕೊಡಬೇಕೆಂದಲ್ಲವೇ ನೀವಿಬ್ಬರೂ ಇಷ್ಟೊಂದು ಪುಕ್ಕಟೆಯಪುರಾಣವನ್ನು ಹರಟುವುದು? ಆಗಲಿ. ಯುಧಿಷ್ಠಿರನು ಕಣ್ಣಿಗೆ ಬಿದ್ದಕೂಡಲೇ ಅರ್ಧ ರಾಜ್ಯವನ್ನು ಕೊಡುವೆನು.

ಭಟ—(ಪ್ರವೇಶಿಸಿ) ಜೀಯಾ! ಅವಧರಿಸು. ವಿರಾಟನಗರದಿಂದ ದೂತನು ಬಂದಿರುವನು.

ದುರ್ಯೋಧನ—ಒಳಗೆ ಬರಹೇಳು.

ಭಟ—ಮಹಾರಾಜನೇ! ಅಪ್ಪಣೆ. (ಎಂಧು ತೆರಳುವನು.)

ಉತ್ತರ—(ಪ್ರವೇಶಿಸಿ)

ವಿರಾಟನಗರಿಯಿಂದ ಹಸ್ತಿನಾವತಿಗೆ ಬಹಳದೂರವಿಲ್ಲದಿದ್ದರೂ ದಾರಿಯುಲ್ಲಿ ಕುದುರೆಗಳು ವೇಗವಾಗಿ ನಡೆಯುವುದಕ್ಕೆ ಅನುಕೂಲ್ಯವಿಲ್ಲ. ದಾರಿಯುಲ್ಲಿಯೇ ಬಹಳ ಸಾವಕಾಶವಾಯಿತು. ಮೊನ್ನೆ

ಯದಿನದ ಯುದ್ಧದಲ್ಲಿ ಕುಂತೀಕುಮಾರನಾದ ಅರ್ಜುನನ ಬಾಣ ಗಳ ಪೆಟ್ಟಿನಿಂದು ನೂರಾರು ಆನೆಗಳು ದಾರಿಗೆ ಅಡ್ಡಲಾಗಿ ಬಿದ್ದಿರುವುವು. ನೆಲವೆಲ್ಲಾ ಹಳ್ಳತಿಟ್ಟುಗಳಾಗಿರುವುದು. ಇಂತು ನಿಮ್ನೋನ್ನತವಾದ ದಾರಿಯಲ್ಲಿ ಕುದುರೆಗಳು ರಥವನ್ನು ವೇಗವಾಗಿ ಸೆಳೆಯಲಾರದುದರಿಂದ ಸಾವಕಾಶವಾಯಿತು.

(ಮುಂದುವರಿದು ಕೈಮುಗಿದು) ಆಚಾರ್ಯರೆ! ಪಿತಾಮಹನೇ ಮುಂತಾದ ರಾಜಮಂಡಲಿಯಲ್ಲಿ ನೆರೆದಿರುವ ನರಪಾಲಕರೆ! ನಮಸ್ಕಾರವು.

ಎಲ್ಲರೂ—ಆಯುಷ್ಮಂತನಾಗಿ ಸುಖದಿಂದ ಬಾಳು.

ದ್ರೋಣ—ಪೂಜ್ಯನಾದ ವಿರಾಟೇಶ್ವರನು ಏನೆಂದು ಹೇಳಿಕಳುಹಿಸಿರುವನು.

ಉತ್ತರ—ನನ್ನನ್ನು ಪೂಜ್ಯನಾದ ನಮ್ಮ ತಂದೆಯು ಕಳುಹಿಸಲಿಲ್ಲ.

ದ್ರೋಣ—ಹಾಗಾದರೆ ಯಾರ ಮಾತಿನಂತೆ ಬಂದಿರುವೆ?

ಉತ್ತರ—ಲೋಕಮಾನ್ಯನಾದ ಯುಧಿಷ್ಠಿರನ ಆಜ್ಞಾನುಸಾರ.

ದ್ರೋಣ—ಧರ್ಮರಾಜನು ಹೇಳಿದುದೇನು?

ಉತ್ತರ—ಆಚಾರ್ಯವರ್ಯಾ! ಲಾಲಿಸು.

"ಉತ್ತರೆಯು ನನಗೆ ಸೊಸೆಯಾಗುವಂತೆ ನಿಶ್ಚಯವಾಗಿರುವುದು. ಸಕಲ ರಾಜಮಂಡಲಿಯೊಡನೆ ತಮ್ಮ ಆಗಮನವನ್ನು ನಿರೀಕ್ಷಿಸುತ್ತಿರುವೆನು. ವಿವಾಹವು ಇಲ್ಲಿಯೋ? ಅಥವಾ ಅಲ್ಲಿಯೋ? ಎಲ್ಲಿ ನಡೆಯಿಸಬೇಕು?" ಎಂದು.

ಶಕುನಿ—ಉಹು. ಉಹು. ಅಲ್ಲಿಯೇ! ಅಲ್ಲೇ. (ಎಂದು ಕೈಬೀಸುವನು.)

ದ್ರೋಣ—ಇತ್ಯರ್ಥವು ನಮಗೆ ಸೇರಿತು. ಇನ್ನೂ ಐದು ರಾತ್ರಿಗಳೂ ಪೂರೈಸಲಿಲ್ಲ. ದುರ್ಯೋಧನನ ಗಡುವಿನೊಳಗಾಗಿಯೇ ಪಾಂಡವರ ಸಮಾಚಾರವೂ ತಿಳಿಯಬಂದಿರುವುದು. ಧರ್ಮದಿಂದಲೇ ಭಿಕ್ಷೆಯನ್ನು ಕೇಳುತ್ತಿರುವರು. ಧರ್ಮವಾಗಿ ಅವರಿಗೆ ಸಲ್ಲಬೇಕಾದುದನ್ನು ಸಲ್ಲಿಸಬಹುದಲ್ಲವೇ? ಅದಕ್ಕೆ ತಕ್ಕಂತೆಯೇ ಧರ್ಮರಾಜನೂ ನಿರೀಕ್ಷಿಸುತ್ತಿರುವನು.

ದುರ್ಯೋ—ಬಳ್ಳೆಯದು. ಮೊದಲಿನಂತೆಯೇ ಪಾಂಡವರಿಗೆ ನಾನ
ರಾಜ್ಯವನ್ನು ಕೊಟ್ಟಿರುವೆನು. ನಾನೊಬ್ಬನು ಸತ್ತರೂ ಲೋಕ
ವೆಲ್ಲವೂ ಇರುವುದಿಲ್ಲವೇ? ಸತ್ಯವೂ ಎಂದೆಂದೆಗೂ ಲೋಕದಲ್ಲಿ
ಶಾಶ್ವತವಾದುದಲ್ಲವೇ?

ದ್ರೋಣ—ನಮಗೆಲ್ಲರಿಗೂ ಬಹಳ ಸಂತೋಷವಾಯಿತು. ಕುಲವೈರವ
ಶಾಂತವಾಗಿ ಮರಳಿ ಇಬ್ಬರೂ ಏಕೀಭವಿಸಿದರು. ನಮ್ಮ ಅರಸ
ನಾದ ರಾಜಸಿಂಹನು ಈ ಭೂಮಂಡಲವನ್ನು ಪರಿಪಾಲಿಸಲಿ!

(ಎಂದೆಲ್ಲರೂ ತೆರಳುವರು.)

ಮೂರನೆಯ ಅಂಕವು ಮುಗಿದುದು.

ಪಂಚರಾತ್ರ ಸಮಾಪ್ತಂ.

